ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

# ಸಾಮಾನ್ಯಜ್ಞಾನ

ಡಿಸೆಂಬರ್ ೧೯೮೫



ಕುವೆಂಪು
(ಪ್ರಥಮ ವಿಶ್ವ ಕನ್ನಡ ಸಮ್ಮೇಳನಾ ಉದ್ಘಾಟಕರು)

ಸಂಪಾದಕ: ಕೊಂಡಜ್ಜಿ ಕೆ. ವೆಂಕಟೇಶ್

## ಒಳಪುಟಗಳಲ್ಲಿ

ಸಾಮಾನ್ಯಜ್ಞಾನ

ಕನ್ನಡ ಶೈಕ್ಷಣಿಕ ಮಾಸಪತ್ರಿಕೆ

ಸಂಪುಟ ೪ ಸಂಚಿಕೆ ೬ ಡಿಸಂಬರ್ ೧೯೮೫ ಪುಟ ೩೨ ಬೆಲೆ ರೂ. ೧-೦೦



ಸಂಪಾದಕ
ಕೊಂಡಜ್ಜಿ ಕೆ. ವೆಂಕಟೇಶ್
ಎಂ.ಎ., ಬಿ.ಕಾಂ.

ಸಹ ಸಂಪಾದಕ
ಜಿ. ಮಣಿಪ್ರಕಾಶ್

ಮುದ್ರಕರು
ಕೊಂಡಜ್ಜಿ ಪ್ರಿಂಟರ್ಸ್
216, ಸುಬ್ರಮಣ್ಯನಗರ
ಬೆಂಗಳೂರು-560 021

## "ಪ್ರಥಮ ವಿಶ್ವ ಕನ್ನಡ ಸಮ್ಮೇಳನ"

೧೯೮೫ ಡಿಸೆಂಬರ್ ೧೫, ೧೬, ಮತ್ತು ೧೭ ಈ ಮೂರು ದಿನಗಳಲ್ಲಿ "ವಿಶ್ವ ಕನ್ನಡ ಸಮ್ಮೇಳನ"ವನ್ನು ಮೈಸೂರು ನಗರದಲ್ಲಿ ನಡೆಸಲು ಕರ್ನಾಟಕ ಸರ್ಕಾರ ನಿರ್ಧರಿಸಿದೆ. ಹಿಂದೆ ಈ ಯೋಜನೆಯನ್ನು ಕಾಂಗ್ರೆಸ್ ಪಕ್ಷ ಅಧಿಕಾರವಲ್ಲಿದ್ದಾಗ ಹಾಕಿಕೊಂಡ ಪುಸ್ತಕಗಳ ಪ್ರಕಟಣೆ, ಕಟ್ಟಡ ನಿರ್ಮಾಣ ಇನ್ನೂ ಅನೇಕ ಉಪ ಯುಕ್ತ ಕಾರ್ಯಕ್ರಮಗಳೊಂದಿಗೆ ದುಂದು ವೆಚ್ಚದ ಕಾರ್ಯಕ್ರಮಗಳೂ ಇದ್ದವು. ಅಧಿಕಾರ ಕಳೆದುಕೊಂಡ ಕಾಂಗ್ರೆಸ್ ಪಕ್ಷದ ಉತ್ತರಾಧಿಕಾರಿಯಾಗಿ ಬಂದಿರುವ ಜನತಾ ಪಕ್ಷದ ಕರ್ನಾಟಕ ಸರ್ಕಾರವು ದುಂದು ವೆಚ್ಚ ವನ್ನು ಕಡಿಮೆ ಮಾಡಲು ಯೋಚಿಸಿರುವುದು ಸ್ವಾಗತಾರ್ಹವೇ. ಆದರೆ ಈ ಮೂರು ದಿನಗಳಷ್ಟೇ ವಿಶ್ವ ಕನ್ನಡ ಸಮ್ಮೇಳನವಾಗದೇ ವಿಶ್ವದ ಅಸ್ತಿತ್ವ ವಿರುವವರೆಗೂ ಕನ್ನಡ ಬೆಳಗುವುದರ ಜೊತೆಗೆ ಮೊಳಗುವಂತಾಗಬೇಕು.

ಮೂರನೇ ದರ್ಜೆ ರಾಜಕೀಯ ನಡೆಸುವ ಅವಿವೇಕಿಗಳಿಗೆ ಕನ್ನಡ ಎಂದೂ ಬಲಿಯಾಗಬಾರದು. ಪಕ್ಕದ ತಮಿಳರಿಗೆ, ತೆಲುಗು ಜನತೆಗೆ ಬಾರದ ಅಡ್ಡಿ ನಮಗೇಕೆ ಅಡ್ಡಿಯಾಗಬೇಕು ?

"ವಿಶ್ವಕನ್ನಡ ಸಮ್ಮೇಳನ" ವಿಶ್ವಪ್ರಿಯವಾಗಬೇಕು.

"ಸಿರಿಗನ್ನಡಂ ಗೆಲ್ಗೆ"

ಕೊಂಡಜ್ಜಿ ಕೆ. ವೆಂಕಟೇಶ್

ಸಂಪಾದಕ

## ಮಾಸ ಚಿಂತನ

ಕನ್ನಡಿಗರೇ, ನೀವು ಎಚ್ಚೆತ್ತಿದ್ದೀರಿ, ಬೇಗ ಒಂದಾಗಿ, ಮುಂದಾಗಿರಿ. ಕರ್ನಾಟಕ ರತ್ನ ಸಿಂಹಾಸನದ ದಿವ್ಯ ತೇಜಸ್ಸನ್ನು ಎಲ್ಲರೂ ಕೂಡಿ ಬೆಳಸಿ, ಹೆಮ್ಮೆಯ ಒಡವೆಯನ್ನಾಗಿ ಮಾಡಿಕೊಳ್ಳಿ. ಕನ್ನಡ ಬಾವುಟ ಒಂದಾಗಲಿ.

– ಬಿ. ಎಂ. ಶ್ರೀಕಂಠಯ್ಯ

---

## ನಿಮ್ಮ ಪತ್ರ

ಮಾನ್ಯರೇ,

ನಿಮ್ಮ ಪತ್ರಿಕೆಯ "ಮಾಸ ಜ್ಞಾನ" ಅಂಕಣ ತುಂಬಾ ಉಪಯುಕ್ತವಾಗಿದೆ. ಚಿತ್ರಗಳನ್ನು ಒಳಗೊಂಡು ಇನ್ನೂ ಸವಿಸ್ತಾರವಾದ ಲೇಖನಗಳಿಂದ "ಸಾಮಾನ್ಯಜ್ಞಾನ" ರೂಪುಗೊಳ್ಳಲಿ.

ತುಮಕೂರು ಟಿ. ಬಸವರಾಜ

---

### ಸಾಮಾನ್ಯಜ್ಞಾನ

1985ರ ಡಿಸೆಂಬರ್ 31 ರ ಒಳಗೆ ಚಂದಾದಾರರಾಗಿ
ಐದು ರೂಪಾಯಿಗಳನ್ನು ಉಳಿಸಿ.
1986ರ ಜನವರಿಯಿಂದ ವಾರ್ಷಿಕ ಸದಸ್ಯತ್ವ ರೂ. 15/– ಆಗಿದೆ
(ಅಂಚೆ ವ್ಯವಸ್ಥೆ ಸೇರಿ)

| | | |
|---|---|---|
| ಡಿಸೆಂಬರ್ ಒಳಗೆ | 1) ಅಜೀವ ಸದಸ್ಯತ್ವ | – ರೂ. 101/– |
| ಡಿಸೆಂಬರ್ ನಂತರ | ,, ,, | – ರೂ. 150/– |
| ಡಿಸೆಂಬರ್ ಒಳಗೆ | 2) ವಾರ್ಷಿಕ ಚಂದಾ | – ರೂ. 10/– |
| ಡಿಸೆಂಬರ್ ನಂತರ | ,, ,, | – ರೂ. 15/– |

ಹಣವನ್ನು ಎಂ.ಓ. ಮೂಲಕ ಕಳಿಸಿ.

ಬರೆಯಿರಿ : ಸಂಪಾದಕರು, ಸಾಮಾನ್ಯಜ್ಞಾನ, 216, ಸುಬ್ರಮಣ್ಯನಗರ, ಬೆಂಗಳೂರು–21.

# ನೋಬೆಲ್ ಪ್ರಶಸ್ತಿ ವಿಜೇತರು

(ವೈದ್ಯಕೀಯ ಹಾಗೂ ಶರೀರ ಶಾಸ್ತ್ರ)

(ಮುಂದುವರಿದದ್ದು)

| | | |
|---|---|---|
| 1926 | ಡೆನ್ಮಾರ್ಕ್ | ಜೋಹಾನ್ಸ್ ಫಿಬಿಗರ್ |
| 1927 | ಆಸ್ಟ್ರಿಯಾ | ಜೆ. ವ್ಯಾಗ್ನರ್-ಔರಗ್ |
| 1928 | ಫ್ರಾನ್ಸ್ | ಚಾರ್ಲ್ಸ್ ನೀಕೋಲೆ |
| 1929 | ಇಂಗ್ಲೆಂಡ್ | ಸರ್ ಎಫ್. ಜಿ. ಹಾಪ್‌ಕಿನ್ಸ್ ಮತ್ತು |
| | ಹಾಲೆಂಡ್ | ಸಿ. ಈಜ್ಮಾನ್ |
| 1930 | ಅಮೇರಿಕಾ | ಕಾರ್ಲ್ ಲ್ಯಾಂಡ್‌ಸ್ಟೀನರ್ |
| 1931 | ಜರ್ಮನಿ | ಓಟೋ ಹೆಚ್. ವಾರ್‌ಬರ್ಗ್ |
| 1932 | ಇಂಗ್ಲೆಂಡ್ | ಸರ್ ಸಿ. ಎಸ್. ಷೆರಿಂಗ್‌ಟನ್ ಮತ್ತು |
| | | ಇ. ಡಿ. ಆಡ್ರಿಯನ್ |
| 1933 | ಅಮೇರಿಕಾ | ಟಿ. ಹೆಚ್. ಮೋರ್ಗನ್ |
| 1934 | ಅಮೇರಿಕಾ | ಜಿ.ಆರ್. ಮಿನೋಟ್, ಜಿ.ಹೆಚ್. ವಿಪ್ಪಲ್ |
| | | ಮತ್ತು ಡಬ್ಲ್ಯು.ಪಿ. ಮರ್ಫಿ |
| 1935 | ಜರ್ಮನಿ | ಹಾನ್ಸ್ ಸ್ಪೇಮ್ಯಾನ್ |
| 1936 | ಇಂಗ್ಲೆಂಡ್ | ಸರ್ ಹೆನ್ರಿ ಹೆಚ್. ಡೇಲ್ ಮತ್ತು |
| | ಆಸ್ಟ್ರಿಯಾ | ಓಟ್ಟೋ ಲೋವಿ |
| 1937 | ಹಂಗೇರಿ | ಎ. ಜೆಂಟ್–ಜೋರ್ಗಿ |
| 1938 | ಬೆಲ್ಜಿಯಂ | ಸಿ. ಹೆಮ್ಯಾನ್ಸ್ |
| 1939 | ಜರ್ಮನಿ | ಜಿ. ಡೊಮಾಗ್ |

1940 ರಿಂದ 1942 ರವರೆಗಿನ ಪ್ರಶಸ್ತಿಗಳನ್ನು ನೀಡಲಾಗಿಲ್ಲ.

(ಮುಂದುವರೆಯುವುದು)

---

ಅಕ್ಟೋಬರ್ 1985ರ "ನಿಮಗಾಗಿ ಉತ್ತರಗಳು :– 1) ಆ, 2) ಇ, 3) ಇ, 4) ಅ, 5) ಅ, 6) ಇ, 7) ಆ, 8) ಇ, 9) ಇ, 10) ಇ (ಟೋಕಿಯೋ ಬಿಟ್ಟು ಉಳಿದವೆಲ್ಲವೂ ದ್ವೀಪಗಳು)

## ನಿಮಗೆ ತಿಳಿದಿರಲಿ

1. ವೆನಿನ್‌ಜುಲಾದಲ್ಲಿರುವ "ಏಂಜಲ್" ಜಲಪಾತವು ಅತಿ ಹೆಚ್ಚು ಎತ್ತರದಿಂದ (2648 ಅಡಿಗಳು) ಧುಮುಕುವ ಜಲಪಾತವಾಗಿದೆ.

2. ಮನಷ್ಯನ ದೇಹದ ತೂಕದಲ್ಲಿ ಶೇಕಡ 70 ರಷ್ಟು ನೀರಿನದ್ದಾಗಿರುತ್ತದೆ.

3. ಭಾರತದಲ್ಲಿ ಮೊದಲಿಗೆ ಷೇರ್‌ಷಾನ ಕಾಲದಲ್ಲಿ (1542) ರೂಪಾಯಿಯ ನಾಣ್ಯ ಮುದ್ರಿಸಲ್ಪಟ್ಟಿತು.

4. ಈಕ್ವೆಡಾರ್ (ದ. ಅಮೆರಿಕಾ) ಜಗತ್ತಿನ ಅತಿ ಹೆಚ್ಚು ಬಾಳೆಹಣ್ಣು ಬೆಳೆಯುವ ರಾಷ್ಟ್ರವಾಗಿದೆ.

5. ಕ್ಯೂಬಾ ದ್ವೀಪವನ್ನು ಕೊಲಂಬಸ್ 1492 ರಲ್ಲಿ ಕಂಡುಹಿಡಿದನು.

6. "ಮೆಸೊಪೊಟೋಮಿಯಾ"ದ ಆಧುನಿಕ ಹೆಸರೇ ಇಂದಿನ ಇರಾಕ್.

7. ಭಾರತೀಯ ರೈಲ್ವೆಯು ವಿಶ್ವದಲ್ಲಿಯೇ ನಾಲ್ಕನೇ ಹಾಗೂ ಏಶಿಯಾದಲ್ಲಿಯೇ ಅತಿ ದೊಡ್ಡದೆನಿಸಿದೆ.

8. 1853 ರಲ್ಲಿ ಭಾರತದಲ್ಲಿ ಪ್ರಥಮವಾಗಿ "ತಂತಿ" ಸಂಪರ್ಕ ರಚಿಸಲಾಯಿತು.

9. ಪ್ರಪಂಚದಲ್ಲಿ ಒಟ್ಟು 2796 ಕ್ಕೂ ಹೆಚ್ಚು ಭಾಷೆಗಳಿವೆಯೆಂದು ಅಂದಾಜು ಮಾಡಲಾಗಿದೆ.

10. ನಾರ್ವೆಯ ಉತ್ತರ ಪ್ರದೇಶಗಳಲ್ಲಿ ಮೇ ಮಧ್ಯಭಾಗದಿಂದ ಜುಲೈ ಅಂತ್ಯದ ವರೆಗೂ ಪೂರ್ಣ ಕತ್ತಲಾಗುವುದೇ ಇಲ್ಲ.

....o....

ನಿಮಗಾಗಿ-

ಈ ಕೆಳಗೆ ಕೆಲವು ಪ್ರಶ್ನಾವಳಿಗಳನ್ನು ಕೊಡಲಾಗಿದೆ. ಸರಿಯಾದ ಉತ್ತರವನ್ನು ಆರಿಸುವುದರ ಮೂಲಕ ನಿಮ್ಮ ಬುದ್ಧಿ ಶಕ್ತಿಯನ್ನು ಪರೀಕ್ಷಿಸಿಕೊಳ್ಳಿ. ನಿಮ್ಮ ಉತ್ತರ ಹತ್ತು ಬಂದರೆ ಉತ್ತಮ, ಹನ್ನೆರಡಕ್ಕಿಂತ ಹೆಚ್ಚಾದರೆ ಶ್ರೇಷ್ಠ ಎಂದು ಭಾವಿಸಿಕೊಳ್ಳಿ.

1. ಮಹಾತ್ಮಾ ಗಾಂಧೀಜಿ ಹುಟ್ಟಿದ್ದು
   ಅ) ಅಕ್ಟೋಬರ್ 2, 1869 ಆ) ನವೆಂಬರ್ 14. 1902
   ಆಗಸ್ಟ 15, 1947

2. ವಿಶ್ವಸಂಸ್ಥೆಯ ಕೇಂದ್ರ ಕಛೇರಿ ಎಲ್ಲಿದೆ ?
   ಅ) ಆಫ್ರಿಕಾ ಆ) ಆಸ್ಟ್ರೇಲಿಯ ಇ) ನ್ಯೂಯಾರ್ಕ್

3. ರಾಜ್ಯ ಸಭೆಯ ಒಟ್ಟು ಸದಸ್ಯರು ಎಷ್ಟು ?
   ಅ) 250 ಆ) 350 ಇ) 524

4. ಲೋಕ ಸಭೆಯ ಒಟ್ಟು ಸದಸ್ಯರು ಎಷ್ಟು ?
   ಅ) 542 ಆ) 384 ಇ) 524

5. ಅಲಿಪ್ತ ರಾಷ್ಟ್ರಗಳ ಏಳನೇ ಸಭೆ ಎಲ್ಲಿ ನಡೆಯಿತು ?
   ಅ) ನವದೆಹಲಿ ಆ) ಹವಾನಾ ಇ) ಬಲ್ಗ್ರೇಡ್

6. ಕಪ್ಪು ಮಣ್ಣು ಯಾವ ಬೆಳೆಯನ್ನು ಬೆಳೆಯಲು ಅನುಕೂಲ ?
   ಅ) ಕಬ್ಬು ಆ) ಭತ್ತ ಇ) ಹತ್ತಿ

7. ಕೋನಾರ್ಕ್ ದೇವಾಲಯವು ಎಲ್ಲಿದೆ ?
   ಅ) ಒರಿಸ್ಸಾ ಆ) ಕರ್ನಾಟಕ ಇ) ದೆಹಲಿ

8. ಚೆನ್ನಕೇಶವ ದೇವಾಲಯವು ಎಲ್ಲಿದೆ ?
   ಅ) ತಾಂಜಾವೂರು ಆ) ಬೇಲೂರು ಇ) ಹಳೇಬೀಡು

9. ಬಾದಾಮಿ ಯಾವ ರಾಜರ ರಾಜಧಾನಿಯಾಗಿತ್ತು ?
   ಅ) ಪುಲಿಕೇಶಿ ಆ) ಕೃಷ್ಣದೇವರಾಯ ಇ) ವಿಷ್ಣುವರ್ಧನ

10. ದೆಹಲಿ ಏತಕ್ಕೆ ಪ್ರಸಿದ್ಧಿ
ಅ) ಹತ್ತಿ ಗಿರಣಿ ಆ) ಭಾರತದ ರಾಜಧಾನಿ ಕಬ್ಬಿಣದ ಅದಿರು

11. ಜಲಿಯನ್ ವಾಲಾಬಾಗ್ ಘಟನೆ ಎಂದು ನಡೆಯಿತು ?
ಅ) 13ನೇ ಏಪ್ರಿಲ್ 1919 ಆ) ನವೆಂಬರ್ 1, 1983
ಇ) ಜೂನ್ 15. 1875

12. 1988ರ ಒಲಪಿಂಕ್ ಸ್ಪರ್ಧೆಗಳು ಎಲ್ಲಿ ನಡೆಯಿತು
ಸೆಓಲ್ ನವದೆಹಲಿ ಒ) ಇಟಲಿ

13. ಭಾರತದ ಅಣು ಶಕ್ತಿ ಸಂಸ್ಥೆಯ ಇಂದಿನ ಅಧ್ಯಕ್ಷರು ಯೊರು ?
ಅ) ಸೇತಿಶ್ ಧಾವನ್ ಆ) ರಾಜಾರಾಮಣ್ಣ ಇ) ರಾಜೀವ ಗಾಂಧಿ

14. 1886ರಲ್ಲಿ ಭೂಮಿಯ ಸಮೀಪ ಬರಲಿರುವ ಹ್ಯಾಲಿ ಧೂಮಕೇತುವು ಕಳೆದ ಸಲ ಯಾವ ವರ್ಷದಲ್ಲಿ ಕಾಣಸಿಕೊಂಡಿತ್ತು ?
ಅ) 1916 ಆ) 1817 ಇ) 1987

15. ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಪ್ರಥಮ ಅಧ್ಯಕ್ಷರು ಯಾರು
ಅ) ಡಬ್ಲ್ಯು ಸಿ ಬೊನೆರ್ಜಿ ಆ) ಗಾಂಧಿಜಿ ಇ) ಎ.ಓ. ಹ್ಯೂಂ

16. ಗಂಗಾನದಿ ಎಲ್ಲಿ ಹುಟ್ಟುತ್ತದೆ ?
ಅ) ತಲಕಾವೇರಿ ಆ) ಸಿಂಧ್ಯ ಪರ್ವತ ಇ) ಗಂಗೋತ್ರಿ

17. ಕಾಗೆ ಬಂಗರವು ಕೆಳಗಿನ ಯೊವ ರಾಜ್ಯದಲ್ಲಿ ಹೆರಳವಾಗಿ ದೊರೆಯುತ್ತದೆ?
ಅ) ಬಿಹಾರ್ ಆ) ಆಂಧ್ರಪ್ರದೇಶ ಇ) ಕರ್ನಾಟಕ

18. 1985 ಸಾಹಿತ್ಯ ನೋಬೇಲ್ ಪ್ರಶಸ್ತಿ ಯಾರಿಗೆ ಲಭಿಸಿದೆ ?
ಕ್ಲಾಡ್ ಸಿಮನ್ ಆ) ಮೈಕಲ್ ಎಸ್. ಬ್ರೌನ್ ಇ) ಜೋಸಫ್

19. ವಿಶ್ವಬ್ಯಾಂಕ್‌ನ ಇಂದಿನ ಅಧ್ಯಕ್ಷರು ಯಾರು ?
ಅ) ಎ ಡಬ್ಲ್ಯೂ ಕ್ಲಾಸನ್ ಆ) ಮುನಾವಿ ಇ) ರಾಕ್‌ಹಡ್ಸನ್

20. ಬ್ರಹ್ಮ ಸಮಾಜದ ಸ್ಥಾಪಕರು ಯಾರು ?
ರಾಜಾರಾಮ ಮೋಹನ ರಾಮಂ ಆ) ವಿವೇಕಾನಂದ ಇ) ಗಾಂಧೀಜಿ

(ಉತ್ತರಗಳು ಮುಂದಿನ ಸಂಚಿಕೆಯಲ್ಲಿ)

## ದೇಶ ಮತ್ತು ನಾಣ್ಯಗಳು

| ದೇಶಗಳ ಹೆಸರುಗಳು | ಒಂದು ಕರೆನ್ಸಿನೋಟು | ಚಿಲ್ಲರೆ ನಾಣ್ಯಗಳು |
|---|---|---|
| ಏಡನ್ | ದೀನಾರ್. | 1000 ಫಿಲ್ಸ್ |
| ಅಫ್ಘಾನಿಸ್ತಾನ್ | ಆಫ್‌ಗನಿ | 100 ಫಿಲ್ವ |
| ಆಲ್ಜೀರಿಯಾ | ದೀನಾರ್ | 100 ಸೆನ್‌ಟೈಂಸ್ |
| ಅರ್ಜೆಂಟೈನ | ಪೆಸೊ | 100 ಸೆಂಟಾವ್ರೋಸ್ |
| ಆಸ್ಟ್ರೇಲಿಯಾ | ಡಾಲರ್ | 100 ಸೆಂಟ್ಸ್ |
| ಆಸ್ಟ್ರಿಯ | ಷಿಲ್ಲಿಂಗ್ | 100ಗ್ರಾಸ್‌ಜೆನ್ |
| ಬಹರೈನ್ ದ್ವೀಪಗಳು | ದೀನಾರ್ | 1000 ಫಿಲ್ಸ್ |
| ಬೆಲ್ಜಿಯಂ | ಫ್ರಾಂಕ್ | 100 ಸೆನ್‌ಟೈಂಸ್ |
| ಬ್ರೆಜಿಲ್ | ಕ್ರುಜೀರೊ | 100 ಸೆಂಟಾವೋಸ್ |
| ಬಲ್‌ಗೇರಿಯಾ | ಲೆವ್ | 100 ಸ್ಟೋಟಿಂಕಿ |
| ಬರ್ಮಾ | ಕ್ಯಾಟ್(ಚ್ಯಾ) | 100 ಪ್ಯಾಸ್ |
| ಕಾಂಬೋಡಿಯಾ | ರಿಯಾಲ್ | 100 ಸೆನ್ |
| ಕೆನಡ | ಡಾಲರ್ | 100 ಸೆಂಟ್ಸ್ |
| ಸಿಲೋನ್ | ರೂಪಾಯಿ | 100 ಸೆಂಟ್ಸ್ |
| ಚೀನಾ | ಯಾನ್ | 10 ಚಿಯಾವೊ |
| ಕ್ಯೂಬಾ | ಪೆಸೋ | 100 ಸೆಂಟ್‌ವೋಸ್ |
| ಸೈಪ್ರಸ್ | ಪೌಂಡ್ | 1000 ಮಿಲ್ಸ್ |
| ಝೆಕೋಸ್ಲವೇಕಿಯಾ | ಕ್ರೌನ್ | 100 ಹೆಲ್ಲರ್ಸ್ |
| ಡೆನ್‌ಮಾರ್ಕ್ | ಕ್ರೊನರ್ | 100 ಓರ್ |

-o-

(ಮುಂದುವರೆದಿದೆ)

| | |
|---|---|
| ಲಜಪತರಾಯ್ (ವಿಶೇಷ ಸಭೆ) | 1920 |
| ವಿಜಯ ರಾಘವಾಚಾರಿಯರ್ (ವಾರ್ಷಿಕ ಸಭೆ) | 1920 |
| ಸಿ.ಆರ್. ದಾಸ್ (ಅಧ್ಯಕ್ಷರು) | |
| (ಹಂಗಾಮಿ–ಹಕಿಂ ಅಜ್ಮಲ್ ಖಾನ್) | 1921 |
| ಸಿ. ಆರ್. ದಾಸ್ | 1922 |
| ಎ. ಕೆ. ಆಜಾದ್ (ವಿಶೇಷಸಭೆ) | 1923 |
| ಮೊಹಮದ್ಅಲಿ (ವಾರ್ಷಿಕಸಭೆ) | 1923 |
| ಮೋಹನದಾಸ್ ಕರಮಚಂದ ಗಾಂಧಿ | 1924 |
| ಸರೋಜಿನಿ ನಾಯ್ಡು | 1925 |
| ಎಸ್. ಶ್ರೀನಿವಾಸ್ ಆಯ್ಯಂಗಾರ್ | 1926 |
| ಎಂ. ಎ. ಅನ್ಸಾರಿ | 1927 |
| ಮೋತಿಲಾಲ್ ನೆಹರು | 1928 |
| ಜವಾಹರಲಾಲ್ ನೆಹರು | 1929–30 |
| ವಲ್ಲಭಭಾಯಿ ಪಟೇಲ್ | 1931 |
| ಅಮೃತ ಲಾಲ್ | 1932 |
| ಶ್ರೀಮತಿ ಸೇನ್ ಗುಪ್ತಾ | 1933 |
| ರಾಜೇಂದ್ರ ಪ್ರಸಾದ್ | 1934 |
| ರಾಜೇಂದ್ರ ಪ್ರಸಾದ್ | 1935 |
| ಜವಾಹರಲಾಲ್ ನೆಹರು | 1936 |
| ಜವಾಹರಲಾಲ್ ನೆಹರು | 1937 |
| ಸುಭಾಶ್ ಚಂದ್ರ ಬೋಸ್ | |
| (ಸುಭಾಷ್ ಚಂದ್ರಬೋಸ್ ಅವರ | |
| ರಾಜೀನಾಮೆ, ಅವರ ಸ್ಥಾನದಲ್ಲಿ | |
| ರಾಜೇಂದ್ರ ಪ್ರಸಾದರ ನೇಮಕ) | 1939 |
| ಮೌಲಾನಾ ಅಬ್ದುಲ್ ಕಲಾಂ ಆಜಾದ್ | 1940–46 |
| ಜವಾಹರಲಾಲ ನೆಹರು (ಜುಲೈ ಸೆಪ್ಟೆಂಬರ್) | 1947 |
| ಜೆ. ಬಿ. ಕೃಪಲಾನಿ | 1947 |

(ಸಂಗ್ರಹ)

# ಸಂಸದೀಯ ಸರಕಾರ ಹಾಗೂ ಅಧ್ಯಕ್ಷೀಯ ಸರಕಾರ

ಬಿ. ಕಾ. ಮೂರ್ತೀಶ್ವರಯ್ಯ

(ಮುಂದುವರೆದಿದೆ)

* ಈ ಕಾರಣಕ್ಕಾಗಿಯೆ ಸಂವಿಧಾನದ ತಿದ್ದುಪಡಿಯ ವಿಧಿಯನ್ನು ಅಳವಡಿಸಿರುವುದು. ದೈನಂದಿನ ವ್ಯವಹಾರಗಳಲ್ಲಿ ತಲೆದೋರಬಹುದಾದ ಸಂಕ್ರಮಣ ಸ್ಥಿತಿಗಳನ್ನು ಎದುರಿಸಲು ಸಂವಿಧಾನಕ್ಕೆ ತಿದ್ದುಪಡಿ ಇರಬೇಕು. ಈ ರೀತಿಯ ತಿದ್ದುಪಡಿಯ ಕ್ರಮಕ್ಕೆ ನನ್ನ ವಿರೋಧವಿಲ್ಲ. ಆದರೆ ಪ್ರತಿಯೊಂದು ಸಣ್ಣಪುಟ್ಟ ಅಡಚಣೆಗೂ ಸಂವಿಧಾನಕ್ಕೆ ತಿದ್ದುಪಡಿ ತರುವುದು ಸರಿಯಲ್ಲ. ಪ್ರತಿಯೊಂದು ಸಂಕ್ರಮಣಾವಸ್ಥೆಯನ್ನು ನಿವಾರಿಸಲು ಸಂವಿಧಾನಕ್ಕೆ ತಿದ್ದುಪಡಿ ತರುವುದೆಂದರೆ ಮಾತ್ರ ನಮ್ಮ ವಿರೋಧ. ಈಗಿರುವ ನಮ್ಮ ಸಂವಿಧಾನಕ್ಕೆ ಹಲವಾರು ಬಾರಿ ತಿದ್ದುಪಡಿ ಮಾಡಲಾಗಿದೆ. ನಮ್ಮ ಸಂವಿಧಾನನಲ್ಲಿ ಎರಡು ವಿಶಿಷ್ಟವಾದ ಮಹತ್ವಗಳನ್ನು ನೋಡುತ್ತೇವೆ. ಇಡೀ ವಿಶ್ವದಲ್ಲೇ ಇದು ದೀರ್ಘ ಸಂವಿದಾನವಾಗಿದೆ. ಅಲ್ಲದೆ ಅತಿ ಹೆಚ್ಚಿನ ತಿದ್ದುಪಡಿಗಳಿಗೆ ಒಳಪಟ್ಟಿದೆ. ಇದೇ ಇದರ ವೈಶಿಷ್ಟ್ಯ.

ಸಂವಿಧಾನ ರಚನಾ ಸಭೆಯ ಸದಸ್ಯರು ಆರಂಭದಿಂದಲೂ ನಮ್ಮ ಸರಕಾರ ಪ್ರಜಾಸತ್ತಾತ್ಮಕ ಲಕ್ಷಣಗಳನ್ನು ಹೊಂದಿರಬೇಕು ಎಂಬ ಅಂಶವನ್ನು ಸ್ಪಷ್ಟವಾಗಿ ತಿಳಿದುಕೊಂಡಿದ್ದರು. ಅವರು ತಮ್ಮ ಮುಂದೆ ಮೂರು ಮಾದರಿಯ ವ್ಯವಸ್ಥೆಗಳನ್ನು ಇಟ್ಟುಕೊಂಡಿದ್ದರು. ಅಮೇರಿಕಾದ ಅಧ್ಯಕ್ಷೀಯ ವ್ಯವಸ್ಥೆ, ಬ್ರಿಟನ್ನಿನ ಸಂಸದೀಯ ವ್ಯವಸ್ಥೆ, ಸ್ವಿಜರ್‌ಲ್ಯಾಂಡಿನ ಚುನಾಯಿತ ಕಾರ್ಯಾಂಗ ವ್ಯವಸ್ಥೆ. ಈ ಮೂರು ವ್ಯವಸ್ಥೆಗಳಲ್ಲಿ ಯಾವುದಾದರೊಂದು ವ್ಯವಸ್ಥೆಯನ್ನು ಆಯ್ಕೆ ಮಾಡಿಕೊಳ್ಳುವುದೋ ಅಥವಾ ಈ ಮೂರು ವ್ಯವಸ್ಥೆಗಳ ಸಂಶ್ಲೇಷಣೆಯಿಂದ ಕಾರ್ಯಗತವಾಗುವಂಥ ವ್ಯವಸ್ಥೆಯನ್ನು ಆಯ್ಕೆ ಮಾಡಿಕೊಳ್ಳುವುದೋ ಎಂಬುವುದು ಅವರ ಮುಂದಿದ್ದ ಪ್ರಶ್ನೆ. ಕೆಲವು ಮಾರ್ಪಾಡುಗಳೊಂದಿಗೆ ಬ್ರಿಟನ್ ಸಂಸದೀಯ ಸರಕಾರದ ವ್ಯವಸ್ಥೆಯನ್ನು ಅಂದಿನ ರಚನಾ ಸಭೆ ಆಯ್ಕೆ ಮಾಡಿಕೊಂಡಿತು. ಐದು ವರ್ಷಗಳಿಗೊಮ್ಮೆ ಅಪ್ರತ್ಯಕ್ಷ ಚುನಾವಣೆಗಳ ಮೂಲಕ ಆಯ್ಕೆಯಾಗುವ, ಸಂವಿಧಾನಾತ್ಮಕವಾಗಿ ಅತ್ಯುನ್ನತ ವ್ಯಕ್ತಿ ಒಬ್ಬ ರಾಷ್ಟ್ರಪತಿ ಇರಬೇಕೆಂದು ಅಂದಿನ ರಚನಾ ಸಭೆ ತೀರ್ಮಾನಿಸಿತು. ಭಾರತದ ಸಂವಿಧಾನ ಸಭೆಯು ಬ್ರಿಟನ್ನಿನ ಸಂಸದೀಯ ಸರಕಾರದ ವ್ಯವಸ್ಥೆಯನ್ನೂ ಆಯ್ಕೆ ಮಾಡಿಕೊಳ್ಳಲು ಕಾರಣವೇನೆಂದರೆ, ಭಾರತವು ಬಹುಕಾಲ ಬ್ರಿಟನ್ನಿನೊಡನೆ ಮೈತ್ರಿಯಿಂದ ಕೂಡಿತ್ತು.

ಬ್ರಿಟನ್ ಮಾದರಿಯ ವ್ಯವಸ್ಥೆ ಅತಿ ಸಮರ್ಪಕವಾದ ವ್ಯವಸ್ಥೆ ಎಂದು ಭಾರತದ ಸಾರ್ವಜನಿಕ ಮುಖಂಡರು ಕಂಡುಕೊಂಡಿದ್ದರು ಎಂದು ಕೆ. ಎಂ. ಮುನ್ಶಿ ಹೇಳುತ್ತಾರೆ. ಭಾರತದ ಸಂವಿಧಾನದ ರಚನಾ ಸಭೆಯಲ್ಲಿ ಕೆಲವು ಮುಸ್ಲಿಂ ಸದಸ್ಯರು "ಸ್ವಿಸ್"ನಲ್ಲಿರುವ ಚುನಾಯಿತ ಮಂತ್ರಿಗಳ ಆಡಳಿತ ವ್ಯವಸ್ಥೆಯನ್ನು ಬಯಸಿದರು. ದಾಮಾಷಾ ಪ್ರತಿನಿಧಿಗಳ ಪ್ರಕಾರ, ಶಾಸಕರು ವರ್ಗೀಯಿಸಲ್ಪಡುವ ಏಕಮತವನ್ನು ಚಲಾಯಿಸುವ ಆಧಾರದ ಮೇಲೆ. ಸಚಿವ ಸಂಪುಟದ ಚುನಾವಣೆ ನಡೆಸಬೇಕೆಂದು ಪ್ರತಿನಿಧಿಯು ಮಸೂದೆಯೊಂದನ್ನು ಮಂಡಿಸಿದರು. ಮತ್ತೊಬ್ಬ ಪ್ರತಿನಿಧಿ "ಕಾಜಿಕರಿಮುದ್ದೀನ್"ರವರು ಸಂಸದೀಯರಹಿತ ಕಾರ್ಯಾಂಗ ವ್ಯವಸ್ಥೆಯನ್ನು ಬಯಸಿದರು. ಪ್ರಮಾಣಾನುವಾದ ಪ್ರಾತಿನಿಧ್ಯ ಪ್ರಕಾರ ಸಂಸತ್ತಿನ ಕೆಳ ಮನೆಯ ಸದಸ್ಯರು ವರ್ಗಾಭಿಮತ ಏಕಮತವನ್ನು ಚಲಾಯಿಸುವ ಮುಖಾಂತರ ಪ್ರಧಾನಮಂತ್ರಿಯನ್ನು ಚುನಾಯಿಸಬೇಕಾಗುತ್ತದೆ ಮತ್ತು ಇತರೇ ಮಂತ್ರಿಗಳನ್ನು ವರ್ಗಾಮಿತ ಏಕಮತವನ್ನು ಚಲಾಯಿಸದೆ ಇರುವುದರ ಮುಖಾಂತರ ಆಯ್ಕೆ ಮಾಡಬೇಕಾಗುತ್ತದೆ. ಶಾಸನ ಸಭೆಯ ಅವಧಿಯೇ ಮಂತ್ರಿಗಳ ಅವಧಿ ಕೂಡ. ಭ್ರಷ್ಟಾಚಾರ ಅಥವಾ ದೇಶ ದ್ರೋಹದ ಆಧಾರದ ಮೇಲೆ ಒಬ್ಬ ಮಂತ್ರಿಯನ್ನು ತೆಗೆದುಹಾಕಲು ಅವಕಾಶ ಇರುತ್ತದೆ. ಓರ್ವ ಪ್ರತಿನಿಧಿಯ ಪ್ರಕಾರ ಭಾರತದ ವ್ಯವಸ್ಥೆ ಸ್ವಜನ ಪಕ್ಷಪಾತ, ಅನುಗ್ರಹ ಅಧಿಕಾರದ ದುರುಪಯೋಗದ ಆಧಾರದ ಮೇಲೆ ನಡೆಯುತ್ತದೆ ಎಂಬ ಆರೋಪ ಹೊಂದಿದೆ. ಮತ್ತೊಬ್ಬ ಮುಸ್ಲಿಂ ಪ್ರತಿನಿಧಿಯ ಪ್ರಕಾರ ಅಮೇರಿಕಾ ಮಾದರಿಯ ವ್ಯವಸ್ಥೆಯಲ್ಲಿರುವ ರಾಷ್ಟ್ರಪತಿಗಳಿಗೆ ಬೇಕಾದ ಮಂತ್ರಿಗಳನ್ನು ಆಯ್ಕೆ ಮಾಡುವಲ್ಲಿ ಸ್ವಾತಂತ್ರ್ಯ ಹೊಂದಿದ್ದು ಅದು ಬ್ರಿಟನ್ ವ್ಯವಸ್ಥೆಗಿಂತ ಆದರ್ಶದ ಮೇಲೆ ಆಧರಿಸಿದೆ ಎಂಬುದು. ಸಂವಿಧಾನ ಸಮಿತಿಯ ಒಕ್ಕೂಟ ಅಧ್ಯಕ್ಷರಾಗಿದ್ದ ನೆಹರೂ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತ ಈ ರೀತಿ ಹೇಳಿದರು. "ಅಧ್ಯಕ್ಷೀಯ ಸರಕಾರದ ವ್ಯವಸ್ಥೆಯಲ್ಲಿ ಅಸ್ತಿತ್ವಕ್ಕೆ ಬರುವ ಸರಕಾರ ಮತ್ತು ಸಚಿವ ಸಂಪುಟ ದಾಮಾಷಾ ಪ್ರಕಾರ ಆಯ್ಕೆಯಾದ ಪ್ರತಿನಿಧಿಗಳ ಸರ್ಕಾರಕ್ಕಿಂತ ದುರ್ಬಲವಾಗಿರುತ್ತದೆ. ಆದರೆ ಸಂಸದೀಯ ಸರಕಾರದ ವ್ಯವಸ್ಥೆಯಲ್ಲಿ ಈ ರೀತಿ ಇರುವುದಿಲ್ಲ." ನೆಹರೂರವರು ಮಂತ್ರಿಗಳ ಅಧಿಕಾರದ ನಿಯಮಿತ ಅವಧಿಯನ್ನು ವಿರೋಧಿಸಿದರು. ಅವರು ಈ ರೀತಿ ಹೇಳಿದ್ದರು–"ನಿಮ್ಮ ಸಂವಿಧಾನಕ್ಕೆ ಯಾವ ರೂಪ ಕೊಡಲಿದ್ದೀರಿ ಎಂಬುವುದರ ಮೇಲೆ ಅದು ಅನ್ವಯಿಸುತ್ತದೆ. ಮಂತ್ರಿಗಳನ್ನು ಹೊಂದಿರುವ ಸಂಸದೀಯ ವ್ಯವಸ್ಥೆಯೋ ಅಥವಾ ಅಮೆರಿಕಾ ಮಾದರಿಯ ವ್ಯವಸ್ಥೆಯೋ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇಲ್ಲಿಯತನಕ ನಾವುಗಳು ಮಂತ್ರಿಗಳನ್ನು ಹೊಂದಿದ್ದ ಸಂಸದೀಯ ಮಾದರಿಯ ಮುಖ ಮಾಡಿ ನಡೆದಿದ್ದೇವೆ. ಈಗ ನಾವು ಹಿಂದಕ್ಕೆ ನಡೆಯಲಾರೆವು. ಸಂವಿಧಾನ ರಚನಾ ಸಭೆ ಸಂಸದೀಯ ಕಾರ್ಯಾಂಗದ ಲಕ್ಷಣಗಳನ್ನು ಒಪ್ಪಿಕೊಂಡು ಲೋಕಸಭೆಗೆ ಜವಾಬ್ದಾರಿಯಾಗಿರುವ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲು ಇಚ್ಛಿಸಿತು.

ಭಾರತ ಮತ್ತು ಅಮೇರಿಕಾಗಳಲ್ಲಿ ರಾಷ್ಟ್ರಾಧ್ಯಕ್ಷರು ಇದ್ದರೂ ಸಹ ಈ ಎರಡು ರಾಷ್ಟ್ರಗಳ ನಡುವೆ ಏಕತೆ ಏನೂ ಇಲ್ಲ ಎಂದು ಸಂವಿಧಾನ ರಚನಾ ಸಭೆಯಲ್ಲಿ ಡಾ॥ ಬಿ. ಆರ್ ಅಂಬೇಡ್ಕರ್‌ರವರು ಹೇಳಿರುವುದು ಸಮಂಜಸವಾಗಿದೆ. ಅಮೇರಿಕಾದಲ್ಲಿ ರಾಷ್ಟ್ರಾಧ್ಯಕ್ಷರು ಕಾರ್ಯಾಂಗದ ಉನ್ನತ ವ್ಯಕ್ತಿಯಾಗಿದ್ದು ಮತ್ತು ರಾಷ್ಟ್ರದ ಆಡಳಿತ ವ್ಯವಸ್ಥೆ ರಾಷ್ಟ್ರಪತಿಯ ಅಧಿಕಾರಕ್ಕೆ ಒಳಪಟ್ಟಿರುತ್ತದೆ. ನಮ್ಮ ಸಂವಿಧಾನದಲ್ಲಿ ಬ್ರಿಟಿಷ್ ರಾಷ್ಟ್ರ ರಾಜ ಆಕ್ರಮಿಸಿರುವ ಸ್ಥಾನವನ್ನು ಭಾರತದಲ್ಲಿನ ರಾಷ್ಟ್ರಾಧ್ಯಕ್ಷರು ಅಲಂಕರಿಸಿರುತ್ತಾರೆ. ರಾಷ್ಟ್ರಪತಿ ಇಲ್ಲಿನ ಅತ್ಯುನ್ನತ ವ್ಯಕ್ತಿ. ಆದರೆ ಕಾರ್ಯಾಂಗಕ್ಕೆ ಅಲ್ಲ. ರಾಷ್ಟ್ರಪತಿ ರಾಷ್ಟ್ರವನ್ನು ಪ್ರತಿನಿಧಿಸುತ್ತಾರೆ. ಆದರೆ ರಾಷ್ಟ್ರದ ಆಡಳಿತವನ್ನು ನಡೆಸುವುದಿಲ್ಲ. ರಾಷ್ಟ್ರಪತಿ ರಾಷ್ಟ್ರದ ಹಿರಿತನದ ಒಂದು ಸಂಕೇತ ಮತ್ತು ಆಡಳಿತಕ್ಕೆ ಸಂಬಂಧಿಸಿದಂತೆ ರಾಷ್ಟ್ರಪತಿಗಳ ಒಪ್ಪಿಗೆಯ ಮುದ್ರೆಯೊಂದಿಗೆ ರಾಷ್ಟ್ರ ಕೈಗೊಂಡ ತೀರ್ಮಾನಗಳನ್ನು ತಿಳಿಸಲಾಗುವುದು. ಅಷ್ಟಕ್ಕೆ ಮಾತ್ರ ಅವರ ಸ್ಥಾನ. ಅಮೇರಿಕಾದ ಸಂವಿಧಾನದ ಪ್ರಕಾರ, ಸರಕಾರದ ವಿವಿಧ ಇಲಾಖೆಗಳ ಕಾರ್ಯದರ್ಶಿಗಳು ರಾಷ್ಟ್ರಪತಿಗಳ ಕೈ ಕೆಳಗೆ ಕಾರ್ಯ ನಿರ್ವಹಿಸುತ್ತಾರೆ.

ಭಾರತದಲ್ಲಿ ಆಡಳಿತ ವ್ಯವಸ್ಥೆಯನ್ನು ನಿರ್ವಹಿಸಲು ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಮಂತ್ರಿಗಳಿದ್ದು, ಇವರುಗಳ ರಾಷ್ಟ್ರಪತಿಗಳ ಕೈಕೆಳಗೆ ಕಾರ್ಯ ನಿರ್ವಹಿಸುತ್ತಾರೆ. ಕಾರ್ಯದರ್ಶಿಗಳು ಕೊಡಬಹುದಾದ ಯಾವುದೇ ಸಲಹೆಗೆ ಅಮೆರಿಕಾದ ರಾಷ್ಟ್ರಾಧ್ಯಕ್ಷ ಬದ್ಧನಾಗಿರುವುದಿಲ್ಲ. ಆದರೆ ಭಾರತದ ರಾಷ್ಟ್ರಪತಿಗೆ ಮಂತ್ರಿಗಳು ಕೊಡಬಹುದಾದ ಸಲಹೆಗೆ ಬದ್ಧನಾಗಿರಬೇಕಾಗುತ್ತದೆ. ಮಂತ್ರಿಗಳು ಕೊಡಬಹುದಾದ ಯಾವುದೇ ಸಲಹೆಗೆ ರಾಷ್ಟ್ರಪತಿಯು ವಿರೋಧವಾಗಿ ನಡೆಯುವಂತಿಲ್ಲ. ಹಾಗೂ ಸ್ವತಃ ಯಾವುದೇ ತೀರ್ಮಾನಗಳನ್ನು ತೆಗೆದುಕೊಳ್ಳುವಂತಿಲ್ಲ. ಅಮೆರಿಕಾದ ರಾಷ್ಟ್ರಾಧ್ಯಕ್ಷನಿಗೇ ಯಾವುದೇ ಕಾರ್ಯದರ್ಶಿಯನ್ನು ಯಾವುದೇ ಸಮಯದಲ್ಲಿ ವಜಾ ಮಾಡಲು ಅಧಿಕಾರವಿರುತ್ತದೆ. ಭಾರತದ ರಾಷ್ಟ್ರಾಧ್ಯಕ್ಷ ಆಯ್ಕೆಯಾದ ಮಂತ್ರಿಗಳು ಸಂಸತ್ತಿನ ಬಹುಮತ ಬೆಂಬಲ ಹೊಂದಿರುವವರೆಗೂ ಈ ರೀತಿಯ ಕ್ರಮವನ್ನು ತೆಗೆದುಕೊಳ್ಳಲು ಸಾಧ್ಯವಿರುವುದಿಲ್ಲ.

ಅಮೆರಿಕಾದ ಪದ್ಧತಿ ಭಿನ್ನ ಭಿನ್ನವಾದ ಕಾರ್ಯಾಂಗ ಮತ್ತು ಶಾಸಕಾಂಗದ ಆಧಾರದ ಮೇಲೆ ಅವಲಂಬಿತವಾಗಿರುವ ಕಾರಣ ರಾಷ್ಟ್ರಾಧ್ಯಕ್ಷ ಮತ್ತು ಅವರ ಕಾರ್ಯದರ್ಶಿಗಳು ಕಾಂಗ್ರೆಸ್ಸಿನ ಸದಸ್ಯರಾಗಿರಲು ಸಾಧ್ಯವಿಲ್ಲ.

(ಮುಂದುವರಿಯುವುದು)

| ಗ್ರಂಥ | ಗ್ರಂಥಕರ್ತ |
|---|---|
| ಅಗ್ನಿ ಪರೀಕ್ಷಾ | ಆಚಾರ್ಯ ತುಳಸಿ |
| ಅಕ್ಬರ್ ನಾಮ | ಅಬ್ದುಲ್ ಫಜಲ್ |
| ಅನ್‌ಹ್ಯಾಪಿ ಇಂಡಿಯಾ | ಲಾಲಾ ಲಜಪತ್‌ರಾಯ್ |
| ಅಣ್ಣಾ ಕರೆನಿನಾ | ಲಿಯೋ ಟಾಲ್‌ಸ್ಟಾಯ್ |
| ಅವಂತೀ ಸುಂದರೀ ಕಥಾ | ದಂಡಿ |
| ಆನಂದ ಮಠ | ಬಂಕಿಮಚಂದ್ರ ಚಟರ್ಜಿ |
| ಇಂಡಿಯಾ ಡಿವೈಡೆಡ್ | ರಾಜೇಂದ್ರಪ್ರಸಾದ್ |
| ಊರ್ವಶಿ | ದಿನಕರ |
| ಉತ್ತರರಾಮ ಚರಿತ | ಭವಭೂತಿ |
| ಒಥೆಲೋ | ಷೇಕ್ಸ್‌ಪಿಯರ್ |
| ಕಾಮಸೂತ್ರ | ವಾತ್ಸಾಯನ |
| ಕಾಶೀಖಂಡ | ಶ್ರೀನಾಥ |
| ಕಾದಂಬರಿ | ಬಾಣಭಟ್ಟ |
| ಕಾಮೆಡಿ ಆಫ್ ಎರರ್ | ವಿಲಿಯಂ ಷೇಕ್ಸ್‌ಪಿಯರ್ |
| ಕಿಂಗ್ ಲಿಯರ್ | ವಿಲಿಯಂ ಷೇಕ್ಸ್‌ಪಿಯರ್ |
| ಕಿಮ್ | ರುಡ್ಯಾರ್ಡ್ ಕಿಪ್ಲಿಂಗ್ |
| ಗೈಡ್ | ಆರ್.ಕೆ. ನಾರಾಯಣ್ |
| ಗುಡ್ ಅರ್ತ್ | ಪರ್ಲ್‌ಬಕ್ |
| ಗೋದಾನ | ಪ್ರೇಮಚಂದ್ |
| ಗೀತ ಗೋವಿಂದ | ಜಯದೇವ |
| ಗೀತಾಂಜಲಿ | ರವೀಂದ್ರನಾಥ ಠಾಕೂರ್ |

* *

## ಸಾಮಾನ್ಯ ಜ್ಞಾನ
(ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ)

### ಚಂದಾದಾರರಿಗೆ ಸೂಚನೆ

1985–86ನೇ ಸಾಲಿನ ಚಂದಾಹಣವನ್ನು ದಯಮಾಡಿ ಕಳಿಸಿಕೊಟ್ಟು ನಿಮ್ಮ ಚಂದಾ ಅವಧಿಯನ್ನು ನವೀಕರಿಸಿಕೊಳ್ಳಿ. ಪ್ರತಿ ತಲುಪದಿದ್ದಲ್ಲಿ ದಯವಿಟ್ಟು ಕೂಡಲೇ ತಿಳಿಸಿ.

ವಾರ್ಷಿಕ ಚಂದಾ ಹಣವನ್ನು ಎಂ. ಓ. ಮೂಲಕ ಕಳಿಸಬೇಕು. ಎಂ. ಓ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ತಪ್ಪದೇ ಬರೆಯಬೇಕು.

**ವ್ಯವಹರಿಸಿ :–**

ಸಂಪಾದಕರು, ಸಾಮಾನ್ಯಜ್ಞಾನ
216, ಸುಬ್ರಮಣ್ಯನಗರ ಬೆಂಗಳೂರು–560 021

---

### ಕೊಂಡಜ್ಜಿ ಪ್ರಕಾಶನದ ಪ್ರಕಟಣೆಗಳು

| | | | |
|---|---|---|---|
| "ಪ್ರತಿಬಿಂಬ" | .... ಕಾದಂಬರಿ | ಲೇಖಕರು | ಕೊಂಡಜ್ಜಿ ಕೆ. ವೆಂಕಟೇಶ್ |
| "ಮಂಥನ" | .... ಸಂಕಲನ | ಸಂಪಾದಕ | ಕೊಂಡಜ್ಜಿ ಕೆ. ವೆಂಕಟೇಶ್ |
| ದೇವಸನ್ನಿಧಿಯಲ್ಲಿ | .... ಪರಿಚಯ | ಲೇಖಕ | ,, ,, ,, |
| ಸಾಮಾನ್ಯಜ್ಞಾನ | .... ಸಂಗ್ರಹ | ಲೇಖಕ | ,, ,, ,, |
| ಸೈನ್ಸ್ ಇನ್ ದಿ ಸರ್ವೀಸಸ್ ಆಫ್ ದಿ ಮ್ಯಾನ್ | | ಲೇಖಕ | ಜೆ. ಬಾಲಚಂದ್ರ |

**ಬರಲಿವೆ**

ಕೊಂಡಜ್ಜಿ ಕೆ. ವೆಂಕಟೇಶ್ ಅವರ

೧) **"ಸಾಮಾನ್ಯ ಜ್ಞಾನ–ವಾರ್ಷಿಕ" ಪುಟ** 600
೨) ಒಲವು–ನಿಲುವು ಕವನ ಸಂಗ್ರಹ

**ಪ್ರಗತಿಗಳಿಗೆ ಬರೆಯಿರಿ**

ಪ್ರಕಾಶಕರು, ಕೊಂಡಜ್ಜಿ ಪ್ರಕಾಶನ
216, ಸುಬ್ರಮಣ್ಯನಗರ ಬೆಂಗಳೂರು–560 021

# ಮಾಸಜ್ಞಾನ

(ನವೆಂಬರ್-1985)

2-11-85 ಸೆವೊಲಾಡ್ ಮುರಾಕೋಸ್ಕಿ ಅವರು ಸೋವಿಯತ್ ರಷ್ಯಾದ ಸಹಾಯಕ ಪ್ರಧಾನ ಮಂತ್ರಿಯಾಗಿ ನೇಮಕಗೊಂಡಿದ್ದಾರೆ

3-11-85 ಇವಾನ್‌ಲೆಂಡ್ಲೆ (ಜೆಕೆಸ್ಲೋವಾಕಿಯಾ) ಅವರು ಯುರೋಪಿಯನ್ ಛಾಂಪಿಯನ್ಸ್ ಟೆನ್ನಿಸ್ ಛಾಂಪಿಯನ್‌ಷಿಪ್‌ನ ಅಂತಿಮ ಪಂದ್ಯದಲ್ಲಿ ಜಾನ್ ಮೆಕೆನ್ರೊ ಅವರನ್ನು ಸೋಲಿಸುವುದರ ಮೂಲಕ ಅತ್ಯಧಿಕ ಮೊತ್ತದ ಬಹುಮಾನಗಳನ್ನು ಗೆದ್ದುಕೊಂಡಿದ್ದಾರೆ. ಅವರು ವಿಶ್ವದ ಒಂದನೇ ದರ್ಜೆ ಆಟಗಾರರೆಂದು 2 ಲಕ್ಷ ಡಾಲರ್‌ಗಳನ್ನು ಹಾಗೂ ಒಂದು ಚಿನ್ನದ ಟೆನ್ನಿಸ್ ರಾಕೆಟ್ (ಆರು ಕೆಜಿ ತೂಕ ಹಾಗೂ 1,420 ವಜ್ರಗಳಿಂದ ಜೊಡಣೆಗೊಂಡ) ಸುಮಾರು 7 ಲಕ್ಷ ಡಾಲರ್‌ಗಳಷ್ಟು ಬೆಲೆಬಾಳುವಂಥಹುದನ್ನು ಪಡೆದಿದ್ದಾರೆ. ಅಂದರೆ ಒಟ್ಟು ಬಹುಮಾನದ ಬೆಲೆ ಸುಮಾರು 1.08 ಕೋಟಿ ರೂಪಾಯಿಗಳು.

6-11-85 ಹಿಂದಿ ಚಿತ್ರರಂಗದ ಖ್ಯಾತನಟ ರಾಷ್ಟ್ರಪ್ರಶಸ್ತಿ ವಿಜೇತ ಸಂಜೀವ್ ಕುಮಾರ್ (ಮೂಲನಾಮ ಹರಿಹರ್ ಜರ್‍ರಿವಾಲಾ) ಅವರ ನಿಧನ.

ಸಂತವೊನಿಕಾದಲ್ಲಿ ವಿಶ್ವದ ಪ್ರಥಮ ತ್ರಿವಳಿ ಪ್ರನಾಳ ಶಿಶುಗಳ ಜನನ. ಟಾಂಜಾನಿಯಾದ ಅಧ್ಯಕ್ಷರಾಗಿ ಹುಸೇನ್ ಆಲಿ ಮಿನ್ನಿ ಅವರಿಂದ ಅಧಿಕಾರ ಸ್ವಿಕಾರ.

8-11-85 ಗುಲಾಬಿಯನ್ನು ವಾಣಿಜ್ಯ ದೃಷ್ಟಿಯಿಂದ ಬೆಳೆಯುವುದರಲ್ಲಿ ಅತಿ ಮುಖ್ಯ ದೇಶಗಳಲ್ಲಿ ಇಸ್ರೇಲ್ ಸಹ ಒಂದಾಗಿದೆ. ಇತ್ತೀಚೆಗೆ ಅಲ್ಲಿನ ಹೆಬ್ರ್ಯೂ ವಿಶ್ವವಿದ್ಯಾಲಯದಲ್ಲಿ ನಡೆದ ಮೊಟ್ಟ ಮೊದಲನೆಯ ಸಂಕೀರ್ಣ ದಲ್ಲಿ 15 ಕ್ಕೂ ಹೆಚ್ಚು ದೇಶಗಳಿಂದ 60 ಜನ ಸಂಶೋಧಕರು ಭಾಗವಹಿಸಿ ಇಸ್ರೇಲಿನ ಮುನ್ನಡೆಯನ್ನು ಪ್ರಶಂಸಿಸಿದ್ದಾರೆ. ಗುಲಾಬಿ ದಳಗಳಿಂದ ಅನೇಕ ತಿನಿಸುಗಳನ್ನು ತಯಾರಿಸುವುದರ ಜೊತೆಗೆ ಅದನ್ನು ಕೆಲವು ಔಷದ ತಯಾರಿಕೆಗಳಿಗೂ ಸಹ ಉಪಯೋಗಿಸುತ್ತಾರೆ.

7-11-85 ಲೆ॥ ಜ॥ ಕೃಷ್ಣಸ್ವಾಮಿ ಸುಂದರ್‌ಜಿ ಅವರನ್ನು ಭಾರತೀಯ ಸೇನಾ ಪಡೆಯ ಮುಖ್ಯಸ್ಥರನ್ನಾಗಿ ಆರಿಸಲಾಗಿದೆ. ಈಗ ಆ ಸ್ಥಾನದಲ್ಲಿರುವ ಜ॥ ಎ. ಎಸ್ ವೈದ್ಯ ಅವರು 31-1-1986ರಂದು ನಿವೃತ್ತರಾಗ ಲಿದ್ದಾರೆ. 57 ವರ್ಷದ ಸುಂದರ್‌ಜಿ ಅವರು ಸೇನಾಪಡೆಯ ಮುಖ್ಯಸ್ಥ ರಾಗಿ ಮೂರು ವರ್ಷಗಳಕಾಲ ಅಧಿಕಾರ ಜವಾಬ್ದಾರಿಯನ್ನು ವಹಿಸಿ ಕೊಂಡಿರುತ್ತಾರೆ.

13-11-85 ಟಿ. ವಿ. ರಾಜೇಶ್ವರ್ ಅವರು ಸಿಕ್ಕಿಂನ ರಾಜ್ಯಪಾಲರಾಗಿ ನೇಮಕ ಗೊಂಡರು.

ಕನ್ನಡದ ಖ್ಯಾತ ಸಾಹಿತಿ ಶ್ರೀ ಕೃಷ್ಣಮೂರ್ತಿ ಪುರಾಣಿಕರ ನಿಧನ ಸುಮಾರು 116 ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದ ಅವರು ರಾಜ್ಯ ಸಾಹಿತ್ಯ ಅಕಡೆಮಿಯ ಪ್ರಶಸ್ತಿ ಗೌರವಕ್ಕೆ ಪಾತ್ರರಾಗಿದ್ದರು.

14-11-85 ಪಂಜಾಬ್, ರಾಜ್ಯಸ್ಥಾನ ಹಾಗೂ ಆಂಧ್ರಪ್ರದೇಶ ರಾಜ್ಯಪಾಲರ ಬದಲಾವಣೆ. ಪಂಜಾಬ್‌ನ ರಾಜ್ಯಪಾಲರಾಗಿ ಶಂಕರದಯಾಳ್ ಶರ್ಮ, ಕುಮುದ್ಬನ್‌ಜೋಶಿ ಅವರು ಆಂಧ್ರಪ್ರದೇಶದ ರಾಜ್ಯಪಾಲರಾಗಿ ವಸಂತ ರಾವ್ ಪಾಟೀಲ್ (ಮಹಾರಾಷ್ಟ್ರದ ಮಾಜಿ ಮುಖ್ಯ ಮಂತ್ರಿ) ಅವರು ರಾಜಾಸ್ತಾನದ ರಾಜ್ಯಪಾಲರಾಗಿ ಹಾಗೂ ದೆಹಲಿಯ ಲೆಫ್ಟಿನೆಂಟ್ ಗೌರ್ನರ್ ಆಗಿ ಹೆಚ್. ಎಲ್. ಕಪೂರ್ ಅವರು ನೇಮಕಗೊಂಡಿದ್ದಾರೆ. ತಾತ್ಕಾಲಿಕವಾಗಿ ಹೊಕೆಷ ಸೇಮಾ ಅವರು ಪಂಜಾಬ್ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದ್ದಾರೆ.

16-11-85 ಕನ್ನಡ ರಂಗಭೂಮಿ ಕಲಾವಿದೆ ಬಿ. ಜಯಮ್ಮ ಅವರಿಗೆ ಸಂಗೀತ ನಾಟಕ ಅಕೆಡೆಮಿಯ (ನಾಟಕ ಅಭಿನಯ) ಪ್ರಶಸ್ತಿ ಲಭಿಸಿದೆ.

19-11-85 ಜಿನಿವಾದಲ್ಲಿ ಅಮೇರಿಕಾ ಹಾಗೂ ರಷ್ಯಾದ ಶೃಂಗಸಭೆ ಆರಂಭ. ಇದು ಆ ಎರಡು ರಾಷ್ಟ್ರಗಳ ವರಿಷ್ಟರ ನಡುವೆ ಆರು ವರ್ಷಗಳ ನಂತರ ನಡೆಯು ತ್ತಿರುವ ಮೊದಲ ಮಾತುಕತೆಯಾಗಿದೆ.

ಹರ್‍ಯಾಣಾ ಸಾರಿಗೆ ಸಂಸ್ಥೆಯು ದೇಶದಲ್ಲಿಯೇ ಉತ್ತಮ ಸಾರಿಗೆ ಸಂಸ್ಥೆ ಎಂದು ಯೋಜನಾ ಆಯೋಗವು ತಿಳಿಸಿದೆ. ಅದು ಪ್ರಮಾಣಿಕರಿಗೆ ಆರಾಮದಾಯಕ ಹಾಗೂ ಉತ್ತಮ ಸೌಕರ್ಯದಾಯಕ ಪ್ರಮಾಣ ವನ್ನು (ವೇಳೆಯನುಸಾರ) ಒದಗಿಸಿದೆ ಎಂದು ಹೇಳಲಾಗಿದೆ.

## ಸೂರ್ಯಮಂಡಲ

ಸೂರ್ಯ : ಭಾರತೀಯ ದೃಷ್ಟಿಯಲ್ಲಿ ಸೂರ್ಯನು ಸಕಲ ಜೀವರಾಶಿಗೂ ಚೈತನ್ಯವನ್ನು ನೀಡುವ ದೇವತೆ. ವೈಜ್ಞಾನಿಕವಾಗಿ ಅವಲೋಕಿಸಿದಾಗ ಸೂರ್ಯ ಭೂಮಿಗೆ ಬಹಳ ಹತ್ತಿರದಲ್ಲಿರುವ ಒಂದು ನಕ್ಷತ್ರ. ಸ್ವಯಂ ಪ್ರಕಾಶಿತ. ಅತಿ ಉಷ್ಣ ಉಳ್ಳ ಅನಿಲದಿಂದ ಕೂಡಿದ ನಕ್ಷತ್ರ. ಭೂಮಂಡಲದ ಮೇಲಿನ ಎಲ್ಲ ಸೃಷ್ಟಿಗೂ ಸೂರ್ಯನಿಂದ ಶಾಖ ಉತ್ಪತ್ತಿಯಾಗುತ್ತದೆ.

ನಕ್ಷತ್ರ ; ಸ್ವಯಂ ಪ್ರಕಾಶಿತ ವಸ್ತುವಿಗೆ ನಕ್ಷತ್ರವೆನ್ನುತ್ತಾರೆ.
ಉದಾ : ಸೂರ್ಯ.

ಗ್ರಹ : ಸ್ವಪ್ರಕಾಶವಿಲ್ಲದ, ನಕ್ಷತ್ರಗಳ ಬೆಳಕಿನಿಂದ ಬೆಳಗುವ ವಸ್ತುವಿಗೆ ಗ್ರಹ ವೆನ್ನುತ್ತಾರೆ. ಗ್ರಹಗಳು ನಕ್ಷತ್ರಗಳನ್ನು ಪ್ರದಕ್ಷಿಸುತ್ತವೆ.
ಉದಾ : ಭೂಮಿ.

ಉಪಗ್ರಹ : ಉಪಗ್ರಹವೂ ಸಹ ನಕ್ಷತ್ರಗಳಿಂದ ಪ್ರಕಾಶಿಸಲ್ಪಡುತ್ತವೆ. ಇವು ಗ್ರಹದ ಸುತ್ತ ತಿರುಗುತ್ತಾ ನಿರ್ದಿಷ್ಟ ನಕ್ಷತ್ರದ ಸುತ್ತಲೂ ಪ್ರದಕ್ಷಿಣೆ ಹಾಕು ತ್ತವೆ.

ಉದಾ : ಚಂದ್ರ ಉಪಗ್ರಹವು ಭೂಮಿ ಉಪಗ್ರಹವನ್ನು ಸುತ್ತುತ್ತಾ ಸೂರ್ಯನ ಸುತ್ತಾ ತಿರುಗುತ್ತದೆ.

ಸೌರವ್ಯೂಹ : ಸೂರ್ಯ, ಸೂರ್ಯನನ್ನು ಸುತ್ತುವ (ಉಪಗ್ರಹಗಳನ್ನೊಳ ಗೊಂಡ) ಒಂಭತ್ತು ಗ್ರಹಗಳನ್ನೊಳಗೊಂಡ ಮಂಡಲಕ್ಕೆ ಸೌರಮಂಡಲ ಅಥವಾ ಸೌರವ್ಯೂಹವೆನ್ನುತ್ತಾರೆ.

ಸೂರ್ಯನ ಸುತ್ತಲೂ ಬುಧ, ಶುಕ್ರ, ಭೂಮಿ, ಅಂಗಾರಕ, ಗುರು. ಶನಿ, ಯೂರನಸ್, ನೆಪ್ಚೂನ್ ಮತ್ತು ಪ್ಲೂಟೋ ಈ ಒಂಭತ್ತು ಗ್ರಹಗಳು ಪ್ರದಕ್ಷಿಣೆ ಹಾಕುತ್ತವೆ.

(ಮುಂದುವರೆಯುತ್ತದೆ)

# ಯುವ ಶಕ್ತಿಯ ವಿಕಸನಕ್ಕೆ ಆಕರ್ಷಕ ಯೋಜನೆಗಳು

ಅಂತರ ರಾಷ್ಟ್ರೀಯ ಯುವಜನ ವರ್ಷವು ಕರ್ನಾಟಕದಲ್ಲಿ ಬಹಳ ಸಂಭ್ರಮ ದಿಂದ ಆರಂಭವಾಯಿತು. ಇದರ ಅಂಗವಾಗಿ ಜನವರಿ 1 ರಿಂದ 6ನೇ ತಾರೀಖಿ ನವರೆಗೆ ಬೆಂಗಳೂರಿನ ಸಮೀಪದ ವಿದ್ಯಾನಗರದಲ್ಲಿ ಒಂದು ರಾಷ್ಟ್ರೀಯ ಯುವ ಜನ ಶಿಭಿರವನ್ನು ಏರ್ಪಡಿಸಿದ್ದು. ಭಾರತದಾದ್ಯಂತ ಬಂದಿದ್ದ 1600 ಕ್ಕೂ ಹೆಚ್ಚು ಯುವಜನರು ಆ ತರಬೇತಿ ಶಿಬಿರದಲ್ಲಿ ಭಾಗವಹಿದ್ದರು. ಇದರ ಹಿಂದೆಯೇ ಅಂತರ ರಾಷ್ಟ್ರೀಯ ವಿದಾರ್ಥಿ ಶಿಬಿರ. ಇದರಲ್ಲಿ ಭಾಗವಹಿಸಿದ್ದ 95 ವಿದಾರ್ಥಿಗಳಲ್ಲಿ 24 ಜನ ಕರ್ನಾಟಕದ ವಿದ್ಯಾರ್ಥಿಗಳು.

ಈ ಬಹೂಪಯೋಗಿ ಶಿಬಿರದ ಕಾರ್ಯಕ್ರಮಗಳು ಜೇಸೀಸ್ ಸಂಸ್ಥೆಯ ಸಹಭಾಗಿತ್ವದೊಡನೆ ಏರ್ಪಡಿಸಲಾದ "ಒಂದು ದಿನದ ಕಾರ್ಯಾಗಾರ" ಗಳಿಂದ ಮುಂದುವರೆದು, ಗ್ರಾಮೀಣ ಯುವಜನರಿಗೆ ಕೈಗಾರಿಕೆಗಳು, ಶಿಕ್ಷಣ, ಆರ್ಥಿಕ ನೆರವಿನ ಯೋಜನೆಗಳು ಮುಂತಾದ ಅನುಕೂಲತೆಗಳ ಬಗ್ಗೆ ಸೂಕ್ತ ತಿಳುವಳಿಕೆ ನೀಡುತ್ತದೆ. ಅಲ್ಲದೆ ಯುವಜನರಿಗೆ ಬೇಕಾದ ಕರ್ತೃತ್ವ ಶಕ್ತಿ ಹಾಗೂ ಮುಂದಾಳತ್ವದ ಬಗ್ಗೆ ಮನದಟ್ಟು ಮಾಡಿಕೊಡುತ್ತವೆ.

ಯುವಜನ ವಿನಿಮಯ ಕಾರ್ಯಕ್ರಮದ ಒಂದು ಸಮಗ್ರ ಶಿಬಿರವನ್ನೂ ಯೋಜಿಸಲಾಗಿದೆ.

ಈ ವರ್ಷದ ಪ್ರಾರಂಭದಿಂದ ಗ್ರಾಮೀಣ ಯುವಜನ ಕೇಂದ್ರಗಳನ್ನು ಯೋಜಿಸಲಾಗಿದ್ದು ಆ ಕೇಂದ್ರಗಳು ಗ್ರಾಮೀಣ ಯವಜನರು ಒಂದೆಡೆ ಸೇರಿ, ತಮ್ಮ ತಮ್ಮ ಆಲೋಚನೆಗಳನ್ನು, ವಿಚಾರಗಳನ್ನು ವಿನಿಮಯ ಮಾಡಿಕೊಂಡು ತನ್ಮೂಲಕ ಉಳಿದ ಗ್ರಾಮೀಣ ಯುವಕರಿಗೆ ಪ್ರೇರಕ ಶಕ್ತಿಯಾಗಿ ರೂಪುಗೊಳ್ಳಲಿವೆ.

ಈ ಎಲ್ಲಾ ಕಾರ್ಯಕ್ರಮಗಳ ಜೊತೆ ಜೊತೆಗೇ ಈ ಕೆಳಕಂಡ ನೂತನ ಚಟುವಟಿಕೆಗಳು ಭಾರತದ ಹಾಗೂ ಕರ್ನಾಟಕದ ಯುವಜನರಿಗೆ ಬಹಳಷ್ಟು ಲಾಭದಾಯಕವಾಗಿರುತ್ತವೆ.

- ವಿದ್ಯಾನಗರದಲ್ಲಿನ ಜೆ. ಪಿ. ನಾರಾಯಣ್ ರಾಷ್ಟ್ರೀಯ ಯುವಜನ ಕೇಂದ್ರವು ವರ್ಷಂಪ್ರತಿ 4000 ಕ್ಕೂ ಹೆಚ್ಚಿನ ಯುವಜನರನ್ನು ವಿವಿಧ ಶಿಕ್ಷಣ ಕ್ರಮಗಳಲ್ಲಿ ತರಬೇತಿಗೊಳಿಸುತ್ತದೆ. ಕುಂಬಳಗೋಡಿ ನಲ್ಲಿರುವ ಮಹಿಳಾ ತರಬೇತಿ ಕೇಂದ್ರವು ಜೀವನವನ್ನು ಸುವ್ಯವಸ್ಥಿತವಾಗಿ ಎದುರಿಸಲು ಬೇಕಾದ ತರಬೇತಿಯನ್ನು ಮಹಿಳೆಯರಿಗೆ ನೀಡುತ್ತದೆ.

- ಮುಂದಾಳತ್ವ ತರಬೇತಿ ಕಾರ್ಯಕ್ರಮಗಳು. ಯುವಜನ ಶಿಬಿರಗಳು ಹಾಗೂ ರ್‍ಯಾಲಿಗಳು.

ರಾಜ್ಯ ಸರ್ಕಾರವು ಕ್ರೀಡೆಗಳಿಗೆ ವಿಶೇಷ ಪ್ರಾಮುಖ್ಯತೆಯನ್ನು ನೀಡುತ್ತದೆ. ಕಾರಣ, ಕ್ರೀಡೆಗಳಿಂದ ಆರೋಗ್ಯಕರ, ಶಿಸ್ತಿನ ರಾಷ್ಟ್ರದ ನಿರ್ಮಾಣ ಸಾಧ್ಯವಾಗುತ್ತದೆ. ಇವುಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಯುವಜನರಿಗೆ ಅನೇಕ ಸೌಲಭ್ಯಗಳನ್ನು ನೀಡಲಾಗಿದೆ. ಅವುಗಳೆಂದರೆ –

- ಕ್ರೀಡಾ ಸಸ್ಥೆಂಗಳಿಗೆ ಅರ್ಥಿಕ ಸಹಾಯ
- ಬಾಲ್ಯದಲ್ಲೇ ಗುರುತಿಸಿ – ಬಾಲಕ, ಬಾಲಕಿಯರಿಗಾಗಿ ಒಂದು ಯೋಜನೆ.
- ಕೊಡಗು ಜಿಲ್ಲೆಯ ಕೂಡಿಗೆಯಲ್ಲಿ ಒಂದು ಕ್ರೀಡಾ ಶಾಲೆ
- ಪ್ರತಿಭಾವಂತ ಕ್ರೀಡಾಪಟುಗಳಿಗೆ ಆರ್ಥಿಕ ಸಹಾಯ, ನಗದು ಬಹುಮಾನ ಮತ್ತು ವಿದ್ಯಾರ್ಥಿ ವೇತನಗಳು
- ಗ್ರಾಮೀಣ ಕ್ರೀಡಾ ಕೇಂದ್ರಗಳು
- ಕ್ರೀಡೆಗಳಲ್ಲಿ ಉತ್ತಮ ಪ್ರತಿಭೆ ತೋರುವ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ವೈದ್ಯಕೀಯ, ಎಂಜಿನಿಯರಿಂಗ್ ಮತ್ತು ತಾಂತ್ರಿಕ ಶಿಕ್ಷಣ ಶಾಲೆಗಳ ಪ್ರವೇಶಾವಕಾಶಗಳಲ್ಲಿ ಆಧ್ಯತೆ.
- ಛಾಂಪಿಯನ್‌ಶಿಪ್ ಕ್ರೀಡಾವಳಿಗಳು, ಕ್ರೀಡೋತ್ಸವಗಳು ಹಾಗೂ ಸಾಮೂಹಿಕ ಕ್ರೀಡೆಗಳು
- ಕೋಚಿಂಗ್ ಶಿಬಿರಗಳು ಮತ್ತು ತರಬೇತಿ ಕೇಂದ್ರಗಳು

**ಅಂತರ ರಾಷ್ಟ್ರೀಯ ಯುವಜನ ವರ್ಷ**

(ಸಂಖ್ಯೆ ವಾಪ್ರಇ : ವಾಪ್ರವಿ: ಸಿಆರ್‌ಎಂ : ಸಿ3 : 85-86 (351/ದಿನಾಂಕ5-11-85)

"ಕರ್ನಾಟಕ ವಾರ್ತೆ"

# ನವ ಭಾರತದ ನಿರ್ಮಾಣದತ್ತ ಕೃಷಿ ಅಭಿವೃದ್ಧಿ

— ಡಾ॥ ಕೆ. ಪುಟ್ಟಸ್ವಾಮಯ್ಯ

(ಮುಂದುವರಿದುದು)

ಕೃಷಿ ಕ್ಷೇತ್ರದ ಅಭಿವೃದ್ಧಿ ಆಗಬೇಕಾದರೆ ನೀರಾವರಿಯಲ್ಲಿ ಗಣನೀಯ ಸುಧಾರಣೆ ಆಗಬೇಕು, ಈ ಶತಮಾನದ ಕೊನೆಯೊಳಗಾಗಿ, 125 ದಶಲಕ್ಷ ಹೆಕ್ಟೇರು ಭೂಮಿಯನ್ನು ನೀರಾವರಿಗೊಳಪಡಿಸಬೇಕಾಗಿದೆ. ಈ ಬಗ್ಗೆ ರಾಷ್ಟ್ರೀಯ ಮಟ್ಟದಲ್ಲಿ ಒಂದು ಯೋಜನೆಯನ್ನು ರೂಪಿಸಬೇಕಾಗಿದೆ. ಈ ಯೋಜನೆಯಲ್ಲಿ ಈಗಾಗಲೇ ಪೂರ್ಣವಾಗದೇ ಉಳಿದ ನೀರಾವರಿ ಕಾಮಗಾರಿಗಳಿಗೆ ಪ್ರಾಮುಖ್ಯತೆಯನ್ನು ಕೊಡಬೇಕಾಗುತ್ತದೆ. ಅಂತರ್ಜಲ ಅಭಿವೃದ್ಧಿಗೂ ವಿಶೇಷ ಗಮನ ಅಗತ್ಯ. ರೈತರಿಗೆ ಅವರು ಬೆಳೆದ ಬೆಳೆಗೆ ಉತ್ತಮ ಬೆಲೆ ಸಿಗುವಂತೆ ಒಂದು ನೀತಿಯನ್ನು ನಿರ್ಧರಿಸಬೇಕು. ಈ ರೀತಿ ಆರನೆಯ ಯೋಜನೆಯಲ್ಲಿ ಕಾರ್ಯಕ್ರಮ ಹಾಕಿಕೊಳ್ಳಲಾಗಿತ್ತು.

ಭಾರತದಲ್ಲಿ ಶೇಕಡಾ 70ಕ್ಕೂ ಅಧಿಕ ಜನರು ಕೃಷಿಕ್ಷೇತ್ರವನ್ನೇ ಅವಲಂಬಿಸಿದ್ದಾರೆ. ಈ ಹಿಂದಿನ ಯೋಜನೆಯಲ್ಲಿ ಕೃಷಿ ಅಭಿವೃದ್ಧಿಯು ಶೇಕಡಾ 2.8ರಷ್ಟು ಆಗಿತ್ತು ಮತ್ತು ಇದೇ ಅವಧಿಯಲ್ಲಿ ಶೇಕಡಾ 2.1ರಷ್ಟು ಜನಸಂಖ್ಯೆಯು ಹೆಚ್ಚಳ ಆಗಿತ್ತು. 1979-80ರ ವೇಳೆಗೆ 56.7 ದಶಲಕ್ಷ ಹೆಕ್ಟೇರು ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿದ್ದು ಅದರಲ್ಲಿ ಮೂವತ್ತು ದಶಲಕ್ಷ ಹೆಕ್ಟೇರು ಪ್ರದೇಶವನ್ನು ಸಣ್ಣ ನೀರಾವರಿ ಯೋಜನೆಗಳಿಂದಲೂ ಉಳಿದ 26.7 ದಶಲಕ್ಷ ಹಕ್ಟೇರು ಭೂಮಿಯನ್ನು ಬೃಹತ್ ಮತ್ತು ಮಧ್ಯಮ ತರದ ನೀರಾವರಿಯಿಂದಲೂ ಅಭಿವೃದ್ಧಿಪಡಿಸಲಾಗಿದೆ. ಇನ್ನೂ 58 ದಶಲಕ್ಷ ಹೆಕ್ಟೇರು ಪ್ರದೇಶವನ್ನು ಸಣ್ಣ ನೀರಾವರಿಯಿಂದ ಮತ್ತು 18 ದಶಲಕ್ಷ ಹೆಕ್ಟೇರು ಪ್ರದೇಶವನ್ನು ಅಂತರ್ಜಲ ಅಭಿವೃದ್ಧಿಯಿಂದ ನೀರಾವರಿಯ ವ್ಯಾಪ್ತಿಗೆ ಒಳಪಡಿಸಬಹುದಾಗಿದೆ. 1950-51ರಲ್ಲಿ 55 ದಶಲಕ್ಷ ಟನ್ ಆಹಾರದ ಉತ್ಪಾದನೆಯಾಗಿದ್ದು 1978-79ರ ವೇಳೆಗೆ ಅದು 131 ದಶಲಕ್ಷ ಟನ್‌ಗಳಿಗೆ ಏರಿತ್ತು. 1980-81ರ ಅಂತ್ಯದಲ್ಲಿ ಅದು 135 ದಶಲಕ್ಷ ಟನ್ ಆಯಿತು.

(ಮುಂದುವರಿಯುತ್ತದೆ)

ಪ್ರಶ್ನೆ : ೧) ಸಂವಿಧಾನ ಎಂದರೇನು ? ಭಾರತದ ಸಂವಿಧಾನದ ಗುರಿ ಮತ್ತು ಅವತರಣಿಕೆಯನ್ನು ಸೂಚಿಸಿರಿ.

ಉತ್ತರ :– "ಸಂವಿಧಾನ" ಎಂದರೆ ಒಂದು ರಾಷ್ಟ್ರದ ಶಾಸನಗಳನ್ನು ನಿರ್ದೇಶಿಸುವ ಒಂದು ಗ್ರಂಥ. ಸಂವಿಧಾನವು ಕಾರ್ಯಾಂಗ, ಶಾಸಕಾಂಗ, ಮತ್ತು ನ್ಯಾಯಾಂಗ ಈ ಮೂರು ಅಂಗಗಳನ್ನೊಳಗೊಂಡು ದೇಶದ ಪ್ರಜೆಗಳ ಹಿತರಕ್ಷಣೆಯ ಮೂಲ ಉದ್ದೇಶವನ್ನು ಹೊಂದಿರುತ್ತದೆ. ಭಾರತದ ಸಂವಿಧಾನದ ಗುರಿ ಮತ್ತು ಅವತರಣಿಕೆ ಕೆಳಕಂಡಂತಿದೆ.

"ಭಾರತ ದೇಶದ ಪ್ರಜೆಗಳಾದ ನಾವು ಈ ಭಾರತ ದೇಶವನ್ನು ಸರ್ವ ಸ್ವತಂತ್ರ ಸಮಾಜತಂತ್ರ ಲೌಕಿಕ ಪ್ರಜಾಸತ್ತಾತ್ಮಕ ಗಣರಾಜ್ಯ ರಾಷ್ಟ್ರವನ್ನಾಗಿ ನಿರ್ಮಿಸುವ ಉದ್ದೇಶದಿಂದಲೂ, ಅದರ ಸರ್ವ ಪ್ರಜೆಗಳಿಗೂ

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ

ವಿಚಾರ, ನಂಬಿಕೆ, ವಿಶ್ವಾಸ, ಧರ್ಮ, ಉಪಾಸನೆಗಳ ಅಧಿಕಾರ. ಪ್ರತಿಷ್ಠೆ ಮತ್ತು ಸಂಯೋಗಗಳಲ್ಲಿ ಸಮಾನತೆ,

ಎಲ್ಲರಲ್ಲಿಯೂ ವ್ಯಕ್ತಿಗೌರವ, ಐಕ್ಯತೆ ಮತ್ತು ದೇಶಾಭಿಮಾನವನ್ನು ವೃದ್ಧಿಸುವ ಸಲುವಾಗಿ ಭ್ರಾತೃತ್ವ.

ಈ ಭಾವನೆಗಳನ್ನು ಹೆಚ್ಚಿಸಲು ವೀರಸಂಕಲ್ಪ ಮಾಡಿ ಈ ನಮ್ಮ ಭಾರತದ ಸಂವಿಧಾನ ಸಭೆಯಲ್ಲಿ ಇಂದು ಸಾವಿರದ ಒಂಭೈನೂರೂ ನಲವತ್ತೊಂಭತ್ತನೇ ನವೆಂಬರ್ ಇಪ್ಪತ್ತಾರರಂದು ಈ ಸಂವಿಧಾನವನ್ನು ಒಮ್ಮತದಿಂದ ಅಂಗೀಕರಿಸಿ ಕಟ್ಟಳೆಯೊಂದಿಗೆ ಆತ್ಮಾರ್ಪಿಸಿಕೊಳ್ಳುತ್ತೇವೆ."

ಪ್ರಶ್ನೆ : ೨) ಭಾರತದ ಸಂವಿಧಾನವು ತನ್ನ ಪ್ರಜೆಗಳಿಗೆ ಒದಗಿಸುವ ಮೂಲ ಭೂತ ಹಕ್ಕುಗಳನ್ನು ವಿವರಿಸಿ.

ಉತ್ತರ :– ಭಾರತದ ಪ್ರಜೆಗಳಿಗೆ ಸಂವಿದಾನವು ಒದಗಿಸುವ ಮೂಲಭೂತ ಹಕ್ಕುಗಳು ಕೆಳಕಂಡಂತಿವೆ.

೧. **ಸಮಾನತೆಯ ಹಕ್ಕು :–** ಈ ಹಕ್ಕಿನಿಂದ ಭಾರತದ ಎಲ್ಲ ಪ್ರಜೆಗಳೂ ಒಂದೇ ಸಮಾನ. ಕಾನೂನು ದೃಷ್ಟಿಯಲ್ಲಿ ಎಲ್ಲರೂ ಒಂದೇ ಆದ್ದರಿಂದ ಸರ್ಕಾರಿ ಉದ್ಯೋಗಗಳಲ್ಲಿ ಎಲ್ಲರಿಗೂ ಅವಕಾಶ ಇರುತ್ತದೆ.

೨. **ಸ್ವಾತಂತ್ರ್ಯದ ಹಕ್ಕು :–** ಈ ಹಕ್ಕಿನಿಂದ ಎಲ್ಲಾ ಪ್ರಜೆಗಳೂ ವಾಕ್ ಸ್ವಾತಂತ್ರ್ಯ, ಸಂಘ ಸಂಸ್ಥೆಗಳನ್ನು ನಿರ್ಮಿಸುವ ಸ್ವಾತಂತ್ರ್ಯ, ವಲಸೆ, ವೃತ್ತಿ, ವ್ಯಾಪಾರ, ವ್ಯವಹಾರ ಈ ಹಕ್ಕುಗಳನ್ನು ಪಡೆಯುತ್ತಾರೆ.

೩. **ಶೋಷಣೆ ವಿರುದ್ಧ ಹಕ್ಕು :–** ನಮ್ಮ ಸಂವಿಧಾನವು ಆಸ್ತಿಯು ಮೂಲಭೂತ ಹಕ್ಕೆಂದು ಮಾನ್ಯತೆ ನೀಡಿದೆ. ಯಾವ ಆಸ್ತಿಯನ್ನೇ ಆಗಲಿ ನ್ಯಾಯವಾಗಿ ಹಾಗೂ ಶಾಸನ ಸಮ್ಮತವಿಲ್ಲದ ವಶಪಡಿಸಿಕೊಳ್ಳಲಾಗದು. ಹಲವು ಸಂದರ್ಭಗಳಲ್ಲಿ ಪ್ರಜೆಗಳ ಆಸ್ತಿಯನ್ನು ವಶಪಡಿಸಿಕೊಳ್ಳಬೇಕಾಗಿ ಬಂದರೆ ಸೂಕ್ತ ಪರಿಹಾರವನ್ನು ಕೊಟ್ಟು ಹಾಗೆ ಮಾಡಬಹುದು.

೪. **ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು :–** ಯಾವ ಪ್ರಜೆಯಾದರೂ ಸರಿಯೇ ತನ್ನ ಭಾಷೆ, ಲಿಪಿ ಮತ್ತು ಸಂಸ್ಕೃತಿಗೆ ಶ್ರಮಿಸಿ, ಅವರ ಪೂರ್ಣ ಉಪಯೋಗವನ್ನು ಪಡೆಯಲು ಈ ಹಕ್ಕು ರಕ್ಷಣೆ ನೀಡುತ್ತದೆ. ಬಾಲಕರಿಗೆ ತಮ್ಮ ಮಾತೃಭಾಷೆಯಲ್ಲೇ ವಿದ್ಯಾಭ್ಯಾಸ ಮಾಡಿಸಬಹುದು.

೫. **ಧಾರ್ಮಿಕ ಹಕ್ಕು :–** ಸಾಮಾಜಿಕ ಶಾಂತಿಗೆ ಭಂಗ ಬಾರದಂತೆ ಪ್ರತಿಯೊಬ್ಬ ಪ್ರಜೆಯೂ ತನ್ನ ಧರ್ಮವನ್ನು ಕಾಪಾಡಿಕೊಳ್ಳಬಹುದು. ಧರ್ಮವನ್ನು ಪ್ರಚಾರ ಮಾಡಬಹುದು. ಹಲವಾರು ಧರ್ಮಗಳ ನೆಲೆವೀಡಾದ ನಮ್ಮ ಭಾರತದಲ್ಲಿ ಪ್ರತಿಯೊಂದು ಧರ್ಮಕ್ಕೂ ಸಮಾನತೆಯನ್ನು ಈ ಹಕ್ಕು ನೀಡುತ್ತದೆ.

೬. **ಸಂವಿಧಾನಾತ್ಮಕ ಪರಿಹಾರ :–** ಪ್ರತಿಯೊಬ್ಬ ಪ್ರಜೆಯೂ ಮೇಲಿನ ಮೂಲಭೂತ ಹಕ್ಕುಗಳ ಪ್ರಯೋಜನವನ್ನು ಪಡೆಯಬಹುದಾಗಿದೆ. ಮೇಲಿನ ಹಕ್ಕುಗಳನ್ನು ಕಸಿದುಕೊಳ್ಳದಂತೆ ಈ ಹಕ್ಕು ಎಲ್ಲ ಪ್ರಜೆಗಳಿಗೂ ರಕ್ಷಣೆ ನೀಡುತ್ತದೆ.

(ಮುಂದುವರಿಯುವುದು)

* ಭಾರತದ ಪ್ರಧಾನಿ ರಾಜೀವ್‌ಗಾಂಧಿ ಅವರ ಅಧ್ಯಕ್ಷತೆಯಲ್ಲಿ ರೂ.1,80,000 ಕೋಟಿ ಏಳನೇ ಪಂಚವಾರ್ಷಿಕ ಯೋಜನೆಯ ಕರಡನ್ನು 1985ರ ಸೆಪ್ಟೆಂಬರ್ 17ರಂದು ಅಂಗೀಕರಿಸಲಾಯಿತು.

**ಈ ವರೆಗಿನ ಪಂಚವಾರ್ಷಿಕ ಯೋಜನೆಗಳ ಪಕ್ಷಿನೋಟ**

(ಯೋಜನೆಯ ಮೊತ್ತ ಕೋಟಿ ರೂ.ಗಳಲ್ಲಿ)

| | |
|---|---|
| ಮೊದಲ ಯೋಜನೆ | 2,356 |
| ಎರಡನೇ ಯೋಜನೆ | 4,800 |
| ಮೂರನೇ ಯೋಜನೆ | 7,500 |
| ನಾಲ್ಕನೇ ಯೋಜನೆ | 15,902 |
| ಐದನೇ ಯೋಜನೆ | 39,303 |
| ಆರನೇ ಯೋಜನೆ | 97,500 |
| ಏಳನೇ ಯೋಜನೆ | 1,80,000 |

○ ನ್ಯಾಯ್ಯಾಧೀಶರ ಮಾಸಿಕ ವೇತನವನ್ನು ಹೆಚ್ಚಿಸುವ ಬಗ್ಗೆ ಸಂವಿಧಾನಕ್ಕೆ ತಿದ್ದುಪಡಿಮಾಡುವ ಮಸೂದೆಯನ್ನು ಮುಂದಿನ ಸಂಸತ್ ಅಧಿವೇಶನದ ಮಂಡಿಸಲು ನಿರ್ಧರಿಸಲಾಗಿದೆ ಎಂದು ಭಾರತದ ಕಾನೂನು ಮಂತ್ರಿ ಶ್ರೀ ಅಶೋಕ್ ಸೇನ್ ತಿಳಿಸಿದ್ದಾರೆ.

| ಸ್ಥಾನ | ಈಗಿರುವ ಮಾಸಿಕ ವೇತನ | ಹೆಚ್ಚಿಸಲು ಸೂಚಿಸಲಾಗಿರು ಮಾಸಿಕ ವೇತನ |
|---|---|---|
| ಶ್ರೇಷ್ಠನ್ಯಾಯಾಲಯದ ನ್ಯಾಯಾಧೀಶ | ರೂ. ಮೂರುಸಾವಿರದ ಐನೂರರಿಂದ | ಏಳುಸಾವಿರದ ಐನೂರು |
| ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶ | ರೂ. ನಾಲ್ಕು ಸಾವಿರದಿಂದ | ಎಂಟು ಸಾವಿರದ ಐನೂರು |
| ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ | ರೂ. ನಾಲ್ಕು ಸಾವಿರದಿಂದ | ಎಂಟು ಸಾವಿರ |
| ಸರ್ವೋಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶ | ರೂ. ಐದು ಸಾವಿರದಿಂದ | ಒಂಭತ್ತು ಸಾವಿರ |

(ಜಿಲ್ಲಾನ್ಯಾಯಾಧೀಶರ ವೇತನವನ್ನು ಸಹ ಹೆಚ್ಚಿಸುವ ಸಾಧ್ಯತೆ ಇದೆ)

- ಮಹಾತ್ಮಾ ಗಾಂಧೀಜಿ ಅವರ 116ನೇ ಹುಟ್ಟುಹಬ್ಬವನ್ನು ರಾಷ್ಟ್ರಾದ್ಯಂತ ಅಕ್ಟೋಬರ್ 2ರಂದು ಆಚರಿಸಲಾಯಿತು.

- ಭಾರತೀಯ ಜೀವವಿಮಾ ನಿಗಮದ ಅಧ್ಯಕ್ಷರಾಗಿ ಆನಂದ ಸ್ವರೂಪ ಗುಪ್ತಾ ಅವರನ್ನು ನೇಮಿಸಲಾಗಿದೆ.

- ಶ್ರೀ ಟಿ.ಜಿ.ಎಲ್. ಅಯ್ಯರ್ ಅವರನ್ನು ಕೇಂದ್ರ ಮೀಸಲು ಪಡೆ ಪೊಲೀಸ್ ಮಹಾ ನಿರ್ದೇಶಕರನ್ನಾಗಿ ನೇಮಿಸಲಾಗಿದೆ. (9-9-84)

- ಇಂದಿರಾಗಾಂಧೀ ರಾಷ್ಟ್ರೀಯ ತೆರಪಿನ ವಿಶ್ವವಿದ್ಯಾಲಯದ ಕುಲಾಧಿಪತಿಯನ್ನಾಗಿ ಪ್ರೊ|| ಜಿ.ರಾಮರೆಡ್ಡಿ ಅವರನ್ನು ನೇಮಿಸಲಾಗಿದೆ.

- ಆಂಧ್ರಪ್ರದೇಶ ಸರ್ಕಾರವು ರಾಜ್ಯಕ್ಕೆ ಸೇರಿದ ಹಾಗೂ ಖಾಸಗೀ ವಲಯಗಳಲ್ಲಿನ ನೌಕರಿ ನೇಮಕಾತಿಯನ್ನು ಶೇ 30 ರಷ್ಟು ಮಹಿಳೆಯರಿಗೆ ಮೀಸಲಿರಿಸಿದೆ.

- ನಿಕೊಲೈ ರೈಜ್‌ಕೋವ್ ಅವರು ರಷ್ಯಾದ ನವ ಪ್ರಧಾನಿಯಾಗಿ ನೇಮಕಗೊಂಡಿದ್ದಾರೆ.

- ಬೀರೇಂದ್ರ ಬಿರ್ ಬಿಕ್ರಮ ಶಹದೇವ ಅವರು ನೇಪಾಳದ ಇಂದಿನ ರಾಜರಾಗಿದ್ದಾರೆ.

- ಎಸ್. ಶ್ರೀರಾಮನ್ ಅವರು ಭಾರತದ ಕ್ರಿಕೆಟ್ ನಿಯಂತ್ರಣ ಮಂಡಳಿಯ ಇಂದಿನ ಅಧ್ಯಕ್ಷರಾಗಿದ್ದಾರೆ.

....o....

# ಏಕೀಕೃತ ಕರ್ನಾಟಕ-ಒಂದು ಸಮೀಕ್ಷೆ

ಡಾ॥ ಸೂರ್ಯನಾಥ ಯು. ಕಾಮತ್

(ಮುಂದುವರೆದಿದೆ)

ಒಟ್ಟು 216 ಸದಸ್ಯರಿರುವ ವಿಧಾನ ಸಭೆಯಲ್ಲಿ(1967ರಲ್ಲಿ ಚುನಾಯಿತ ಸದಸ್ಯ ಸಂಖ್ಯೆ 208ರಿಂದ 216ಕ್ಕೆ ಏರಿಸಲಾಗಿತ್ತು). ಕಾಂಗ್ರೆಸ್ಸು ಕೇವಲ 126 ಸ್ಥಾನಗಳನ್ನು ಗೆದ್ದಿತು. 1967ರಲ್ಲಿ ಕರ್ನಾಟಕದಿಂದ ಲೋಕ ಸಭೆಗೆ ವಿರೋಧ ಪಕ್ಷದ ಒಂಭತ್ತು ಸದಸ್ಯರು ಚುನಾಯಿಸಲ್ಪಟ್ಟಿದ್ದರು. ಈ ಪೈಕಿ ಸ್ವತಂತ್ರ ಪಕ್ಷದವರು ಐವರು. ಇವರಲ್ಲಿ ಜೆ. ಎಂ. ಇಮಾಂ ಮತ್ತು ಲೋಬೋ ಪ್ರಭು ಉಲ್ಲೇಖನೀಯರು. ಇದಕ್ಕೂ ಹಿಂದೆ, 1952 ಹಾಗೂ 1957ರಲ್ಲಿ ತಲಾ ಇಬ್ಬರು ಹಾಗೂ 1962ರಲ್ಲಿ ಕೇವಲ ಒಬ್ಬರು ವಿರೋಧಪಕ್ಷದಿಂದ ಲೋಕ ಸಭೆಗೆ ಆಯ್ಕೆಗೊಂಡಿದ್ದರು. 1962ರಲ್ಲಿ ಆಯ್ಕೆಗೊಂಡವರು ಲೋಕ ಸೇವಕ ಸಂಘದ ಅಳವಂಡಿ ಶಿವಮೂರ್ತಿ ಸ್ವಾಮಿ.

1968ರಲ್ಲಿ ವೀರೇಂದ್ರ ಪಾಟೀಲರು ಮುಖ್ಯ ಮಂತ್ರಿಗಳಾದರು. (1968ರ ಮೇಯಿಂದ 1971ರ ಮಾರ್ಚ್‌ವರೆಗೆ) ಮೂರು ವರ್ಷಗಳಿಗೂ ಕಡಿಮೆ ಕಾಲದ ಇವರ ಅಧಿಕಾರಾವಧಿಯು ಅನೇಕ ಮಹತ್ವದ ಸಾಧನೆಗಳಾದುವು. ರಾಜ್ಯದಲ್ಲಿ ಕೈಗಾರಿಕೆಗಳ ಬೆಳವಣಿಗೆಯನ್ನು ಪ್ರೋತ್ಸಾಹಿಸಲು ರಾಜ್ಯದ ಹೊರಗಿನ ಬಂಡವಾಳಕ್ಕೆ ವಿಶೇಷ ಸವಲತ್ತುಗಳನ್ನು ನೀಡಲಾಯಿತು. ಇವರ ಕಾಲಾವಧಿಯಲ್ಲೇ ಆಹಾರ ಧಾನ್ಯಗಳ ಮಟ್ಟಿಗೆ ಆವರೆಗೆ ಕೊರತೆಯ ರಾಜ್ಯವಾಗಿದ್ದ ಕರ್ನಾಟಕವು ಸ್ವಯಂ ಪೂರ್ಣತೆಯನ್ನು ಸಾಧಿಸಿತು. (ರಾಜ್ಯದ ವಾರ್ಷಿಕ ಧಾನ್ಯ ಬಳಕೆ 51 ಲಕ್ಷ ಟನ್ ಆದರೆ, 1971–72 ರಲ್ಲಿ 58.72 ಲಕ್ಷ ಟನ್ ಬೆಳೆಯಲಾಗಿತ್ತು). ಕಾಳೀ ನದೀ ವಿದ್ಯುತ್ ಯೋಜನೆಗೆ 1970ರಲ್ಲಿ ಅಂತಿಮ ರೂಪ ಕೊಡಲಾಯಿತು. 1970ರ ಹೊತ್ತಿಗೆ 10,000 ಗ್ರಾಮ ಗಳಿಗೆ ವಿದ್ಯುತ್ತನ್ನು ಪೂರೈಸಲಾಯಿತು.

1967ರ ಚುನಾವಣೆಯ ನಂತರ ಎಲ್ಲ ವಿರೋಧ ಪಕ್ಷಗಳು ಎಸ್. ಶಿವಪ್ಪನವರ ನಾಯಕತ್ವದಲ್ಲಿ ಸಂಯುಕ್ತ ವಿರೋಧೀ ವಿಧಾಯಕ ದಳ ಎಂಬ ವಿರೋಧೀ ಗುಂಪನ್ನು ವಿಧಾನ ಸಭೆಯಲ್ಲಿ ರಚಿಸಿಕೊಂಡರು. ಅದರಲ್ಲಿ ಸುಮಾರು 90 ಸದಸ್ಯರಿದ್ದರು. ಈ ವಿರೋಧೀ ಗುಂಪು ಹಿಂದಿಗಿಂತಲೂ ಉಗ್ರವಾಗಿ ಆಡಳಿತ ಪಕ್ಷವನ್ನು ಟೀಕಿಸಿ ಆಡಳಿತವನ್ನು ಬಿಗುಗೊಳಿಸಲು ಕಾರಣವಾಯಿತು. 1969ರಲ್ಲಿ ಕಾಂಗ್ರೆಸ್ಸು ವಿಭಜಿತ ವಾಗಿ, ನಿಜಲಿಂಗಪ್ಪನವರ ನಾಯಕತ್ವವನ್ನು ಪ್ರತಿಭಟಿಸಿ ಇಂದಿರಾಗಾಂಧೀ ಪಕ್ಷದಿಂದ ಹೊರ ನಡೆದಾಗ ವಿರೇಂದ್ರ ಪಾಟೀಲರು ನಿಜಲಿಂಗಪ್ಪನವರ ಪಕ್ಷದಲ್ಲಿ ಉಳಿದರು. ಕರ್ನಾಟಕದಲ್ಲಿ ನಿಜಲಿಂಗಪ್ಪನವರ ನಾಯಕತ್ವದ ಸಂಸ್ಥಾ ಕಾಂಗ್ರೆಸ್ಸು ಅಧಿಕಾರದಲ್ಲಿ ಮುಂದುವರಿಯಿತು. 'ಏಕೀಕರಣದ ನಂತರ ಕರ್ನಾಟಕದಲ್ಲಿ ಲಿಂಗಾಯತರೇ ಮುಖ್ಯ ಮಂತ್ರಿಗಳಾಗಿ ಆಯ್ಕೆಯಾಗುತ್ತ ರಾಜ್ಯದಲ್ಲಿ ಬಹುದೊಡ್ಡ ಸಂಖ್ಯೆಯ ಕೋಮಾದ

ಲಿಂಗಾಯಿತರಿಗೇ ಆಡಳಿತದಲ್ಲಿ ಅನುಕೂಲವಾಗುತ್ತಿದೆ ಅಭಿವೃದ್ಧಿ ಕಾರ್ಯಗಳೆಲ್ಲ ಉತ್ತರ ಕರ್ನಾಟಕದಲ್ಲೇ ನಡೆಯುತ್ತಿವೆ' ಎಂಬ ಉಗ್ರ ಆಪಾದನೆಗಳು ಈ ಕಾಲದಲ್ಲಿ ಕೇಳಿ ಬಂದುವು ಈ ರೀತಿ ಟೀಕೆ ಮಾಡುತ್ತಲಿದ್ದ ಅನೇಕ ಗುಂಪುಗಳು ಇಂದಿರಾ ಕಾಂಗ್ರೆಸ್ ಸೇರಲು ಮುನ್ನುಗ್ಗಿದರು.

ಇದೇ ಕಾಲದಲ್ಲಿ 1970ರಲ್ಲಿ ವಿರೇಂದ್ರ ಪಾಟೀಲರ ವಿರುದ್ಧ "ಎಕ್ಸ್-ಪೋ ಚಳುವಳಿ" ನಡೆಯಿತು. ಜಪಾನ್‌ನಲ್ಲಿ ನಡೆಯುತ್ತಿದ್ದ "ಎಕ್ಸ್‌ಪೋ-70" ಎಂಬ ಭಾರೀ ವಸ್ತುಪ್ರದರ್ಶನವೊಂದಕ್ಕೆ ಕರ್ನಾಟಕದಿಂದ ಕಳುಹಿಸಲು ಒಂದು ತರುಣರ ವೀಕ್ಷಕ ತಂಡಕ್ಕೆ ಸದಸ್ಯರನ್ನು ಆಯ್ಕೆ ಮಾಡುವಾಗ ಭಾರೀ ಪಕ್ಷಪಾತ ಮಾಡಲಾಗಿದೆ ಎಂಬ ನೆಪದಿಂದ ನಡೆದ ಈ ವಿದ್ಯಾರ್ಥಿ ಚಳುವಳಿಯು ತೀರ ಉಗ್ರವಾಗಿ ರಾಜ್ಯವನ್ನೇ ವ್ಯಾಪಿಸಿ ಹಿಂಸಾಚಾರಗಳಿಗೆ ಕೂಡ ಅವಕಾಶಮಾಡಿತು.

1971ರಲ್ಲಿ ಲೋಕ ಸಭೆಗೆ ನಡೆದ ಮಧ್ಯಕಾಲೀನ ಚುನಾವಣೆಯಲ್ಲಿ ಇಂದಿರಾ ಕಾಂಗ್ರೆಸ್ ಕರ್ನಾಟಕದಲ್ಲಿನ ಎಲ್ಲ 27 ಸ್ಥಾನಗಳನ್ನು ಗಳಿಸಿದ್ದರಿಂದ ಸಂಸ್ಥಾ ಕಾಂಗ್ರೆಸ್ ಬಹುಸಂಖ್ಯೆಯ ಶಾಸನಸಭಾ ಸದಸ್ಯರು ಪಕ್ಷಾಂತರ ಮಾಡಿ ಇಂದಿರಾ ಕಾಂಗ್ರೆಸ್ ಸೇರಿದರು ಇದರಿಂದ ಬಹುಮತ ಕಳೆದುಕೊಂಡ ವೀರೇಂದ್ರ ಪಾಟೀಲರು ರಾಜೀನಾಮೆ ಕೊಡಬೇಕಾಗಿ ಬಂತು ಕರ್ನಾಟಕದಲ್ಲಿ ಒಂದು ವರ್ಷ ರಾಷ್ಟ್ರಪತಿ ಆಡಳಿತ ಬಂದು ಆಗ ರಾಜ್ಯಪಾಲರಾಗಿದ್ದ ಧರ್ಮವೀರ ಆಡಳಿತ ನಿರ್ವಹಿಸಿದರು.

1969ರಲ್ಲಿ ಕಾಂಗ್ರೆಸ್ ವಿಭಜನೆಯಾದಾಗ ಇಂದಿರಾ ಕಾಂಗ್ರೆಸ್ಸಿನ ಸಂಘಟನೆಯ ಜವಾಬ್ದಾರಿಯನ್ನು ಡಿ ದೇವರಾಜ ಅರಸು ಅವರು ವಹಿಸಿಕೊಂಡರು ಆಗ ರಾಜ್ಯದಲ್ಲಿದ್ದ ಜನತಾ ಪಕ್ಷ, ಪ್ರಸವಾ, ಸ್ವತಂತ್ರ ಪಕ್ಷ ಹಾಗೂ ಸಂಸೋಪಗಳ ಅನೇಕ ಸದಸ್ಯರು ಹೊಸ ಪಕ್ಷವನ್ನು ಸೇರಿ ಎಚ್. ಸಿದ್ದವೀರಪ್ಪನವರ ನೇತೃತ್ವದಲ್ಲಿ ಹೊಸ ವಿರೋಧ ಪಕ್ಷವನ್ನು ರಚಿಸಿಕೊಂಡರು 1972ರಲ್ಲಿ ವಿಧಾನ ಸಭೆಗೆ ಚುನಾವಣೆ ನಡೆದಾಗ ಇಂದಿರಾ ಕಾಂಗ್ರೆಸ್ 165 ಸ್ಥಾನಗಳನ್ನೂ ಸಂಸ್ಥಾ ಕಾಂಗ್ರೆಸ್ 24 ಸ್ಥಾನಗಳನ್ನೂ ಸಂಸೋಪ ಹಾಗೂ ಕಮ್ಯುನಿಸ್ಟ ಪಕ್ಷಗಳು ತಲಾ ಮೂರು ಸ್ಥಾನಗಳನ್ನೂ ಗೆದ್ದವು. ಕೊನೆಯ ಪಕ್ಷವು ಇಂದಿರಾ ಕಾಂಗ್ರೆಸ್ ಜೊತೆ ಒಪ್ಪಂದ ಮಾಡಿ ಚುನಾವಣೆಗೆ ಸ್ಪರ್ಧಿಸಿತ್ತು ಪ್ರಸವಾ ಪಕ್ಷವು ಅಸ್ತಿತ್ವ ಕಳೆದುಕೊಂಡಿತು ಲೋಕಸೇವಕ ಸಂಘ ಮತ್ತು ಜನಸಂಘಗಳು ಒಂದು ಸ್ಥಾನವನ್ನೂ ಪಡೆಯಲಿಲ್ಲ ಆದರೆ ಮುಂದೆ ಪರಿಷತ್ತಿಗೆ ನಡೆದ ಚುನಾವಣೆಗಳಲ್ಲಿ ಜನಸಂಘವು ಪದವೀಧರ ಕ್ಷೇತ್ರದಿಂದ ಕೆಲ ಸ್ಥಾನಗಳನ್ನು ಗೆದ್ದಿತು. ವಿಧಾನ ಪರಿಷತ್ತಿನಲ್ಲಿ ಸಂಸ್ಥಾ ಕಾಂಗ್ರೆನ ಬಹುಮತ ಕೆಲವು ಕಾಲ ಮುಂದುವರಿಯಿತು. ಟಿ. ಎನ್. ನರಸಿಂಹ ಮೂರ್ತಿಯವರು ಪರಿಷತ್ತಿನಲ್ಲಿ ವಿರೋಧಿ ನಾಯಕರಾಗಿದ್ದರು. 1972ರಲ್ಲಿ ದೇವರಾಜ ಅರಸರು ಮುಖ್ಯ ಮಂತ್ರಿಗಳಾದರು ರಾಜ್ಯದಲ್ಲಿನ ಬಹು ಸಂಖ್ಯ ಕೋಮಿನವರಾದ ಲಿಂಗಾಯಿತರು ಹಾಗೂ

ಒಕ್ಕಲಿಗರ ಮೇಲಾಟಕ್ಕೆ ಉತ್ತರವಾಗಿ ಅಲ್ಪ ಸಂಖ್ಯಾತ ವರ್ಗಗಳ ಪ್ರಾತಿನಿಧ್ಯವುಳ್ಳ ಮಂತ್ರಿ ಮಂಡಳ ಇದೆಂದು ಅಭಿಪ್ರಾಯ ಪಡಲಾಯಿತು. ರಾಜ್ಯಕ್ಕೆ ಕರ್ನಾಟಕವೆಂದು ನಾಮಕರಣ ಮಾಡಿದ್ದು (1973)ಹಾಗೂ ಕನ್ನಡವನ್ನು ಎಲ್ಲ ಹಂತಗಳ ಹಾಗೂ ಕನ್ನಡವನ್ನೇ ಎಲ್ಲ ಹಂತಗಳ ಆಡಳಿತ ಬಾಷೆಯೆಂದು ಬಳಸಲು ನಿರ್ಣಯಿಸಿದ್ದು ಈ ಕಾಲದ ಉಲ್ಲೇಖನೀಯ ಕ್ರಮಗಳು. ಕರ್ನಾಟಕ ಭೂ ಸುಧಾರಣಾ ತಿದ್ದುಪಡಿ ಕಾನೂನನ್ನು ಮಂಜೂರು ಮಾಡಿ (1973) ಎಲ್ಲ ತಾಲ್ಲೂಕುಗಳಲ್ಲಿ ಭೂಮಿಯನ್ನು ಉಳುವವನಿಗೆ ನೀಡುವ ಬಗೆ ಕ್ರಮ ಕೈಗೊಳ್ಳಲು ಭೂ ಪಂಚಾಯಿತಿಗಳನ್ನು ನೇಮಿಸಿದ್ದು ಈ ಕಾಲದ ಇನ್ನೊಂದು ಗಣ್ಯ ಕ್ರಮ. ಅರಸು ಅವರ ಎಂಟು ವರ್ಷಗಳ ಪ್ರದೀರ್ಘ ಆಡಳಿತಾವಧಿಯಲ್ಲಿ ಇನ್ನೂ ಅನೇಕ ಗಣ್ಯ ಸಾಧನೆಗಳಾದವು. ಕಾಳೀ ನದಿ ಜಲವಿದ್ಯುತ್ ಯೋಜನೆಯ ಒಂದು ಹಂತ ಪೂರ್ಣವಾಗಿ ರಾಜ್ಯದಲ್ಲಿ ಒಟ್ಟು 17,000 ಗ್ರಾಮಗಳಿಗೆ ವಿದ್ಯುತ್ ಪೂರೈಕೆಯಾಯಿತು. ಅನೇಕ ಗ್ರಾಮಗಳಲ್ಲಿ ಬಡವರ ಮನೆಗೆ ಪುಕ್ಕಟೆ ವಿದ್ಯುತ್ ಪೂರೈಸುವ"ಭಾಗ್ಯಜ್ಯೋತಿ " ಯೋಜನೆ ಆರಂಭಿಸಲಾಯಿತು. ಔದ್ಯಮಿಕ ಕ್ಷೇತ್ರದಲ್ಲೂ ಅಪಾರ ಪ್ರಗತಿಯಾಯಿತು. ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯನ್ನು ವಿಸ್ತರಿಸಿ ಅದನ್ನು ಒಂದು ಲಾಭ ನೀಡುವ ಉದ್ದಿಮೆಯಾಗಿ ಮಾಡಲಾಯಿತು ಮಂಡ್ಯ ಜಿಲ್ಲೆಯಲ್ಲಿ ಸ್ಕೂಟರ್ ಮತ್ತು ಟಯರ್ ಕಾರ್ಖಾನೆಗಳು ಹಾಗೂ ರಾಜ್ಯದಲ್ಲಿ ಅನೇಕ ಸಿಮೆಂಟ್ ಮತ್ತು ಸಕ್ಕರೆ ಕಾರ್ಖಾನೆಗಳು ಆರಂಭವಾದುವು. ಇರಾನ್‌ನ ನೆರವಿನಿಂದ ಕುದುರೆಮುಖದಲ್ಲಿ ಕಬ್ಬಿಣದ ಅದುರು ಎತ್ತುವ ಬೃಹತ್ ಉದ್ಯಮಕ್ಕೆ ನಾಂದಿಯಾಯಿತು. ವಾರ್ಷಿಕ ಆದಾಯ 4,800 ರೂ ವರೆಗೆ ಇರುವ ಎಲ್ಲ ಕುಟುಂಬಗಳ ಮಕ್ಕಳಿಗೆ ಮೆಟ್ರಿಕ್‌ವರೆಗೆ ಪುಕ್ಕಟೆ ಶಿಕ್ಷಣ ನೀಡುವ ಸವಲತ್ತು ಜಾರಿಗೆ ತರಲಾಯಿತು. ಬಡವರಿಗೆ ಮನೆಕಟ್ಟಿಕೊಳ್ಳಲೂ ಮೂರು ಲಕ್ಷ ಉಚಿತ ನಿವೇಶನಗಳನ್ನು ನೀಡಲಾಯಿತಲ್ಲದೆ ಅನೇಕರಿಗೆ ಜನತಾ ಮನೆಗಳನ್ನು ನೀಡಲಾಯಿತು. ಈ ಪೈಕಿ ಹರಿಜನ, ಗಿರಿಜನ ವರ್ಗಗಳಿಗೆ 20,000 ಮನೆಗಳನ್ನು ಕಟ್ಟಿಕೊಡಲಾಯಿತು. ನಾರಾಯಣ ಪೈ ವೇತನ ಆಯೋಗವನ್ನು ನೇಮಿಸಿ ಅದರ ಶಿಫಾರಸುಗಳನ್ನು ಜಾರಿಗೆ ತರಲಾಯಿತು. ರಾಜ್ಯದ ಮೂರೂ ವಿಶ್ವವಿದ್ಯಾಲಯಗಳಿಗೆ ಏಕರೂಪದ ಆಡಳಿತ ವ್ಯವಸ್ಥೆ ತರಲೂ ಕಾನೂನೊಂದನ್ನು ಜಾರಿಮಾಡಲಾಯಿತು.

ಸರಕಾರಿ ನೌಕರಿ ಮತ್ತು ಶಿಕ್ಷಣ ಸಂಸ್ಥೆಗಳ ಪ್ರವೇಶದಲ್ಲಿ ಹಿಂದುಳಿದವರಿಗೆ ರಕ್ಷಣೆ ಒದಗಿಸಲು ಸೂಕ್ತ ಸೂತ್ರವನ್ನು ನಿರೂಪಿಸಲು ಹಾವನೂರು ಆಯೋಗವನ್ನು ನೇಮಿಸಲಾಯಿತು. ಹಿಂದುಳಿದ ವರ್ಗಗಳ 'ಬೈಬಲ್, ಎಂದು ಕರೆಯಲಾದ ಈ ಆಯೋಗದ ವರದಿಗನುಗುಣವಾಗಿ ಹರಿಜನ ಗಿರಿಜನರಿಗಲ್ಲದೆ, ಅನೇಕ ಹಿಂದುಳಿದ ಜಾತಿಯವರಿಗೂ, ಜಾತಿಭೇದವಿಲ್ಲದೆ ಅರ್ಥಿಕವಾಗಿ ಹಿಂದುಳಿದವರಿಗೂ. ಸ್ಥಾನಗಳನ್ನು

ಮೊಸಲಿಡುವ ಪದ್ಧತಿ ಜಾರಿಗೆ ಬಂತು. ಇಂದಿರಾ ಗಾಂಧಿಯವರು ಪ್ರಕಟಿಸಿದ ಇಪ್ಪತ್ತಂಶಗಳ ಕಾರ್ಯಕ್ರಮವನ್ನು ಜಾರಿಗೆ ತರುವಲ್ಲಿ ಅರಸು ಸಂಪುಟದ ಅನೇಕ ಮಹತ್ವದ ಕ್ರಮಗಳನ್ನು ಕೈಗೊಂಡಿತು. ಭೂ ಸುದಾರಣೆ ಹಾವನೂರು ಆಯೋಗದ ವರದಿಯ ಕಾರ್ಯಚರಣೆಯಲ್ಲಿ ಸರಕಾರದ ಕ್ರಮಗಳ ಬಗ್ಗೆ ಉಗ್ರಟೀಕೆ ಬಂದರೂ ಬಹುಸಂಖ್ಯಾತರ ಬೆಂಬಲವು ಇಂದಿರಾ ಕಾಂಗ್ರೆಸ್ಸಿಗೆ ದೊರೆತು 1977ರ ಚುನಾವಣೆಯಲ್ಲಿ ಆ ಪಕ್ಷವು ಕರ್ನಾಟಕದಲ್ಲಿ 28ರಲ್ಲಿ 26 ಸ್ಥಾನಗಳನ್ನು ಗಳಿಸಿತು. ಮುಂದೆ ಚಿಕ್ಕಮಗಳೂರಿನಲ್ಲಿ ಉಪ ಚುನಾವಣೆಗೆ ಸ್ಪರ್ಧಿಸಿ ಇಂದಿರಾ ಗಾಂಧಿಯವರು ಲೋಕಸಭೆಗೆ ಆಯ್ಕೆಗೊಳ್ಳುವುದೂ ಸಾದ್ಯವಾಯಿತು.

1977ರ ಚುನಾವಣೆಯ ನಂತರ ಇಂದಿರಾ ಕಾಂಗ್ರೆಸ್ಸಿನಲ್ಲಿ ಮತ್ತೆ ಒಡಕಾಗಿ ಕೆ. ಎಚ್. ಪಾಟೀಲರ ನೇತೃತ್ವದಲ್ಲಿ 40ಕ್ಕೂ ಮೇಲ್ಪಟ್ಟು ಶಾಸನಸಭಾ ಸದಸ್ಯರು ಪಕ್ಷ ತ್ಯಜಿಸಿದಾಗ ಇಂದಿರಾ ಪಕ್ಷದ ಅರಸು ಸಂಪುಟವು 1.1.1978ರಂದು ರಾಜೀನಾಮೆ ನೀಡಿ ರಾಜ್ಯದಲ್ಲಿ 55 ದಿನಗಳ ರಾಜ್ಯಪಾಲರ ಆಡಳಿತ ಬಂದು ಗೋವಿಂದ ನಾರಾಯಣರು ಅಧಿಕಾರ ನಿರ್ವಹಿಸಿದರು. ದೀರ್ಘಕಾಲ ಆಡಳಿತ ನಡೆಸಿದ ಅರಸು ಅವರ ಆಡಳಿತದಲ್ಲಿ ಭ್ರಷ್ಟಾಚಾರವು ತೀರ ಹೆಚ್ಚಿತ್ತೆಂದು ತೀವ್ರ ಆಪಾದನೆ ಬಂತು ಆ ಬಗ್ಗೆ ನೇಮಕಗೊಂಡ ಗ್ರೋವರ್ ಆಯೋಗವು ಇಂತ ಕೆಲವು ಆಪಾದನೆಗಳು ನಿಜವೆಂದು ಅಭಿಪ್ರಾಯವಿತ್ತಿತು. 1978ರ ಫೆಬ್ರುವರಿಯಲ್ಲಿ ವಿಧಾನಸಭೆಗೆ ಚುನಾವಣೆ ನಡೆದು, ಇಂದಿರಾ ಕಾಂಗ್ರೆಸ್ಸಿಗೆ 151 ಸ್ಥಾನಗಳು ದಕ್ಕಿದವು. ಕೆ. ಎಚ್. ಪಾಟೀಲರು ನಾಯಕರಾಗಿದ್ದ (ಬ್ರಹ್ಮಾನಂದ ರೆಡ್ಡಿ) ಕಾಂಗ್ರೆಸ್ಸು ಕೇವಲ ಎರಡು ಸ್ಥಾನ ಪಡೆಯಿತು 1977ರಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಹಾಗೂ ರಾಜ್ಯದಿಂದ ಲೋಕಸಭೆಗೆ ಎರಡು ಸ್ಥಾನಗಳನ್ನು ಗೆದ್ದಿದ್ದ ಜನಾತಾಪಕ್ಷವು ವಿಧಾನ ಸಭೆಯಲ್ಲಿ 59 ಸ್ಥಾನಗಳನ್ನು ಗೆದ್ದಿತು. ಇಷ್ಟು ಸಂಖ್ಯೆಯಲ್ಲಿ ಒಂದೇ ವಿರೋಧಪಕ್ಷವು ರಾಜ್ಯ ವಿಧಾನಸಭೆಯಲ್ಲಿ ಸ್ಥಾನಗಳನ್ನು ಗೆದ್ದಿರಲಿಲ್ಲ. ವಿಧಾನಸಭೆಯಲ್ಲಿ ಎಚ್. ಡಿ. ದೇವೇಗೌಡರೂ ಪರಿಷತ್ತಿನಲ್ಲಿ ಎ. ಕೆ. ಸುಬ್ಬಯ್ಯನವರೂವಿರೋಧಪಕ್ಷದ ನಾಯಕರಾದರು.

ಇಂದಿರಾ ಕಾಂಗ್ರೆಸ್ಸಿನ ರಾಜ್ಯಶಾಖೆಯ ಅಧ್ಯಕ್ಷತೆಯನ್ನು ತ್ಯಜಿಸಬೇಕೆಂಬ ಆದೇಶವನ್ನು ಉಲ್ಲಂಘಿಸಿ ಮುಖ್ಯಮಂತ್ರಿ ದೇವರಾಜ ಅರಸು ಅವರು 1979ರ ಜೂನ್‌ನಲ್ಲಿ ಇಂದಿರಾ ಕಾಂಗ್ರೆಸ್‌ನಿಂದ ಹೊರಬಿದ್ದರು. ಇದು ಕರ್ನಾಟಕದಲ್ಲಿ ಕಾಂಗ್ರೆಸ್ಸಿನಲ್ಲಿ ನಡೆದ ಮೂರನೆಯ ಒಡಕು. ಬಹುಪಾಲು ಶಾಸಕರು ಅರಸು ಅವರ ಜೊತೆ ಉಳಿದುದರಿಂದ ಅರಸು 1980ರ ಜನವರಿವರೆಗೆ ಅಧಿಕಾರದಲ್ಲಿ ಉಳಿದರು. ಅರಸು ಅವರು ಆಗ ಬ್ರಹ್ಮಾನಂದ ರೆಡ್ಡಿಯವರು ನಾಯಕರಾಗಿದ್ದ ಕಾಗ್ರೆಸ್ ಪಕ್ಷಸೇರಿ ಅದರ ರಾಷ್ಟ್ರೀಯ ಸಮಾವೇಶವನ್ನು ಬೆಂಗಳೂರಲ್ಲೇ ಕರೆದು ತಾವೇ ಅದರ ಅಖಿಲ ಭಾರತ ಅಧ್ಯಕ್ಷರಾದರು.

ಸಾಮಾನ್ಯ ಜ್ಞಾನ/ಡಿಸೆಂಬರ್ 1985

1977ರಲ್ಲಿ ಇಂದಿರಾ ಕಾಂಗ್ರೆಸ್ ತ್ಯಜಿಸಿ ಬ್ರಹ್ಮಾನಂದ ರಡ್ಡಿಯವರ ಪಕ್ಷ ಸೇರಿದ್ದ ಕರ್ನಾಟಕದ ಬಹುಪಾಲು ಕಾಂಗ್ರೆಸ್ಸಿಗರು (ಕೆ. ಹೆಚ್. ಪಾಟೀಲ್, ಎಸ್. ಎಂ. ಕೃಷ್ಣ ಇತ್ಯಾದಿ) ಈ ಹೊಸ ಸನ್ನಿವೇಶದಲ್ಲಿ ಕಾಂಗ್ರೆಸ್ ಸೇರಿದರು.

1980ರಲ್ಲಿ ಲೋಕಸಭೆಗೆ ನಡೆದ ಚುನಾವಣೆಯಲ್ಲಿ ಇಂದಿರಾ ಕಾಂಗ್ರೆಸ್ 28ರಲ್ಲಿ 27 ಸ್ಥಾನಗಳನ್ನು ರಾಜ್ಯದಲ್ಲಿ ಗಳಿಸಿ, ಅರಸು ಕಾಂಗ್ರೆಸ್ಸಿನ ಟಿ.ಎ.ಪೈ, ಎಂ. ವಿ. ಕೃಷ್ಣಪ್ಪನವರಂಥ ಗಣ್ಯ ನಾಯಕರು ಠೇವಣಾತಿ ಕಳೆದುಕೊಳ್ಳುವಂತಾಯಿತು. 1981ರಲ್ಲಾದಂತೆ, ಮತ್ತೆ ಇತಿಹಾಸ ಪುನಾರಾವರ್ತನೆಯಾಗಿ, ಅರಸು ಅವರ ಜೊತೆಗಿದ್ದ ಶಾಸಕರು ಇಂದಿರಾ ಕಾಂಗ್ರೆಸ್ಸಿಗೆ ಪಕ್ಷಾಂತರಮಾಡಿ, ಜನವರಿ 7 ರಂದು ಅರಸು ಮುಖ್ಯಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟರು. ಆಗ ಶಾಸನ ಸಭೆಯಲ್ಲಿ ಇಂದಿರಾ ಗುಂಪಿನ ನಾಯಕರಾಗಿದ್ದ (ಹಿಂದೆ ಅರಸು ಸಂಪುಟದಲ್ಲಿ ಮಂತ್ರಿಯಾಗಿದ್ದು, 1979ರಲ್ಲಿ ಅರಸು–ಇಂದಿರಾ ವಿರಸವಾದಾಗ ಮಂತ್ರಿ ಪದವಿಗೆ ರಾಜೀನಾಮೆ ನೀಡಿದ್ದ)ಆರ್. ಗುಂಡೂರಾವ್ 12–1–1980 ರಂದು ಮುಖ್ಯಮಂತ್ರಿಯಾದರು. ಅರಸು ಬೆಂಬಲಿಗರಾಗಿದ್ದವರೂ ಜನತಾ ಪಕ್ಷದ ಅನೇಕ ಶಾಸಕರೂ ಇಂದಿರಾ ಕಾಂಗ್ರೆಸ್ಸಿಗೆ ಸೇರಿಕೊಂಡು, ವಿರೋಧ ಪಕ್ಷವು ಉಭಯ ಸದನಗಳಲ್ಲೂ ತೀರ ಸೊರಗಿದ ಸ್ಥಿತಿಗೆ ಬಂದಂತಾಯಿತು. ವಿರೋಧ ಪಕ್ಷಗಳ ಜೊತೆ ಆರಂಭದಲ್ಲಿ ಸ್ನೇಹದ ನಿಲುವನ್ನು ತಳೆದ ಗುಂಡೂರಾಯರು ಜನತಾ ಪಕ್ಷದ ಸದಸ್ಯರು ಪರಿಷತ್ತಿನ ಉಪಾಧ್ಯಕ್ಷರಾಗಲು ನೆರವಾದರು. ಜೊತೆಗೆ ತಾವು ಇಂದಿರಾ ಆಶೀರ್ವಾದದಿಂದಲೇ ಅಧಿಕಾರಕ್ಕೆ ಬಂದವರು ಎಂದು ನಮ್ರವಾಗಿ ಹೇಳಿಕೊಂಡರು. ಭೂಪಂಚಾಯ್ತಿಗಳು ತಮ್ಮ ಕೆಲಸವನ್ನು 1981ರ ರಾಜ್ಯೋತ್ಸವದ ಮೊದಲೇ ಮುಗಿಸಬೇಕೆಂದು ನಿರ್ಧರಿಸಿ, ಅಂಥ ಪಂಚಾಯ್ತಿಗಳ ಸಂಖ್ಯೆ ಹೆಚ್ಚಿಸಿದರು. ಅನೇಕ ಪಂಚಾಯ್ತಿಗಳು ಈಗಾಗಲೇ ತಮ್ಮ ಕೆಲಸ ಮುಗಿಸಿದ ವರದಿ ಬಂದಿದ್ದು, ಬಹುಶಃ ಈ ಗುರಿ ಸಾಧ್ಯವಾಗಬಹುದು. ಮಂಗಳೂರು ಮತ್ತು ಕಲ್ಬುರ್ಗಿಯಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಿದರು. (1980). ಆಡಳಿತದಲ್ಲಿ ಚುರುಕು ಹುಟ್ಟಿಸಲು 'ಕಡತಯಜ್ಞ' ಆರಂಭಿಸಿದರು. ತಮಗೆ ಸರಿ ಕಂಡ ಬೇಡಿಕೆಗಳನ್ನು ಸ್ಥಳದಲ್ಲಿಯೇ ಮಾನ್ಯ ಮಾಡುವ ದಿಟ್ಟತನ ತೋರಿದರು.

ಆದರೆ ನಾಡಿನ ಜನಪ್ರಿಯ ಪತ್ರಿಕೆಗಳ ಜೊತೆ ಸರಿಯಾದ ಸಂಬಂಧ ಇಟ್ಟುಕೊಳ್ಳುವಲ್ಲಿ ಮುಖ್ಯಮಂತ್ರಿಗಳು ಸಮರ್ಥರಾಗಿರಲಿಲ್ಲ. ಪತ್ರಿಕಾಲಯದ ದಿಗ್ಬಂಧನದಂಥ ವಿಚಿತ್ರ ಸನ್ನಿವೇಶಗಳು ಇವರ ಕಾಲದಲ್ಲಿ ಆದುವು. ಹಿಂದಿನ ಸರಕಾರದ ಕೆಲವು ನೀತಿಗಳ ಬಗ್ಗೆ ರೈತರಲ್ಲಿ ಮೂಡಿದ್ದ ಅಸಮಾಧಾನವು ಈ ಕಾಲದಲ್ಲಿ ಸ್ಫೋಟವಾಗಿ ನರಗುಂದದಲ್ಲಿ ಹಿಂಸಾಚಾರ, ಗೋಳಿಬಾರು ಆಯಿತು. 1981ರಲ್ಲಿ ನಿಪ್ಪಾಣಿ ಶಿವಮೊಗ್ಗಗಳಲ್ಲಿ ಉಗ್ರ ರೈತಚಳುವಳಿ, ಭಾರೀ ರೈತ ಜಾತಾ ಬೆಂಗಳೂರಿಗೆ ಬಂದ ಅಪೂರ್ವ ಘಟನೆ ನಡೆದವು.

---

(ಡಾ॥ ಕಾಮತ್‌ರ ಲೇಖನ ಇಲ್ಲಿಗೆ ಮುಕ್ತಾಯ ಹಾಗೂ ಈ ಲೇಖನದ ಎರಡನೇ ಭಾಗವನ್ನು ಮುಂದಿನ ಸಂಚಿಕೆಯಿಂದ ಪ್ರಕಟಿಸಲಾಗುವುದು. — ಸಂ.

SAMANYA GNANA, Kannada Monthly, DECEMBER 1985 Price Rs. 1-00 Regd No. BGW — 75

ತೆರೆದ-ಅಂಚೆ

—ಗೆ

ಶ್ರೀಮತಿ/ಶ್ರೀ ______________________________

______________________________

______________________________